# ಪಯಣ

## ಎಸ್. ಮೋಹನ್

ಸಂಪಾದಕ–ಪ್ರಕಾಶಕ

**ಸಂಸ್ಕೃತಿ ಸುಬ್ರಹ್ಮಣ್ಯ**

೯೨, 'ಅನನ್ಯ', ೯ನೇ ಮುಖ್ಯರಸ್ತೆ,

ಸರಸ್ವತಿಪುರ, ಮೈಸೂರು–೯

ಮೊಬೈಲ್ ನಂ. ೯೪೪೮೦೩೭೭೬೨

**PAYANA** - Memoirs by Sri S. Mohan, Mysuru. Mobile : 9945706023, Email : shiva_madan31@yahoo.com, mohan.shivashankar@gmail.com.
Edited and Published by : Samskruthi Subrahmanya, 92, 'Ananya', 9th main, Saraswathipura, Mysuru-9, Karnataka. Ph : 9448037762.
First Edition : 2015

Size : 1/8th Demy

Paper used : Maplitho 70 GSM

Pages : 120

Price : Rs. 110/-

Printed by : **Lipigraph,** Mysuru,
Ph : 8050233270



---

**ಪಯಣ - ಶ್ರೀ ಎಸ್. ಮೋಹನ್ ಅವರ ನೆನಪುಗಳ ಸಂಕಲನ**

ಸಂಪಾದಕ–ಪ್ರಕಾಶಕ:
ಸಂಸ್ಕೃತಿ ಸುಬ್ರಹ್ಮಣ್ಯ
೯೨, 'ಅನನ್ಯ', ೯ನೇ ಮುಖ್ಯರಸ್ತೆ,
ಸರಸ್ವತಿಪುರ, ಮೈಸೂರು–೯
ಮೊಬೈಲ್ ನಂ. ೯೪೪೮೦೩೭೭೬೨
Email : samskruthisubramanya@gmail.com

ಪ್ರಥಮ ಮುದ್ರಣ : ೨೦೧೫

ಪುಟಗಳು : ೧೨೦

ಬೆಲೆ : ರೂ. ೧೧೦/–

ಉಪಯೋಗಿಸಿದ ಕಾಗದ : ೭೦ಜಿ.ಎಸ್.ಎಂ. ಮ್ಯಾಪ್‌ಲಿತೋ

ಪುಸ್ತಕದ ಅಳತೆ : ೧/೮ ಡೆಮಿ

ಮುಖಪುಟ ವಿನ್ಯಾಸ : ಎಂ. ಆಕಾಶ್

ಮುದ್ರಣ : ಲಿಪಿಗ್ರಾಫ್, ಮೈಸೂರು.

# ಅರ್ಪಣೆ

ತಾಯಿ ತಂದೆಯವರ
ಚರಣಾರವಿಂದಗಳಿಗೆ

## ಓದುವ ಮುನ್ನ...

ಅನಂತ ಜೀವನ ದಾರಿಯಲ್ಲಿ ನಿರಂತರವಾಗಿ ಯಾರಿಗೂ ಹೇಳದೆ, ಕೇಳದೆ ಸಾಗುತ್ತಿರುವ ಬದುಕೆಂಬ ಬಂಡಿಗೆ ನನ್ನನ್ನು ಸೆಳೆದುಕೊಂಡು ಲಾಲಿಸಿ, ಪಾಲಿಸಿ ಮತ್ತು ಪೋಷಿಸಿ ಮಾರ್ಗದಲ್ಲಿನ ಸುಖ ದುಃಖ, ಒಳಿತು ಕೆಡುಕು ಹಾಗೂ ಏರುಪೇರುಗಳಲ್ಲದೆ ಸರಸ ವಿರಸಗಳು ಸಮ ಪ್ರಮಾಣದಲ್ಲಿ ಮಿಳಿತಗೊಂಡ ಭವ್ಯವಾದ ಭಕ್ಷ್ಯವನ್ನು ಸವಿಯಲು ನನಗೆ ಅವಕಾಶವಿತ್ತ ಪ್ರಕೃತಿಗೆ ನಾನು ಋಣಿ.

ಬಂಡಿ ಏರಿದ್ದಾಗಲಿನ ನನ್ನ ತಟಸ್ಥ ಸ್ಥಿತಿಯಿಂದ ತೆವಳಿ, ಅಂಬೆಗಾಲಿಟ್ಟು ಆಯತಪ್ಪದೆ ಎದ್ದು ನಿಂತು ಸಾವರಿಸಿಕೊಂಡು ತಪ್ಪು ಹೆಜ್ಜೆಗಳನ್ನನುಸರಿಸುತ್ತಾ ನಡೆದ ನಂತರ ಬಂಡಿಯ ವೇಗವನ್ನು ಸಾಧ್ಯವಾದಷ್ಟರ ಮಟ್ಟಿಗೆ ತಲುಪಲು ಬೇಕಾದ ಶಕ್ತಿಯನ್ನು ಇಲ್ಲಿಯವರೆಗೂ ತಮ್ಮ ವಿಶಾಲ ಹೃದಯದಿಂದ ನಿಷ್ಪಕ್ಷಪಾತವಾಗಿ, ಪ್ರತ್ಯಕ್ಷವಾಗಿಯೋ ಇಲ್ಲ ಪರೋಕ್ಷವಾಗಿಯೋ ನನ್ನೊಡನೆ ಹಂಚಿಕೊಳ್ಳುತ್ತಾ ಬಂದಿರುವ ಎಲ್ಲಾ ಸಹ ಪ್ರಯಾಣಿಕರಿಗೆ ನನ್ನ ಅನಂತ ಧನ್ಯವಾದ.

ಈ ಬರವಣಿಗೆಯ ಮುಖ್ಯ ಉದ್ದೇಶ ನನ್ನ ಜೀವನದಲ್ಲಿನ ಅನುಭವಗಳನ್ನು ಹಾಗೂ ನನ್ನ ಅನಿಸಿಕೆಗಳನ್ನು ನನಗೆ ತಿಳಿದ ರೀತಿಯಲ್ಲಿ ಸಹೃದಯದವರೊಂದಿಗೆ ಹಂಚಿಕೊಳ್ಳುವುದಷ್ಟೆ ಅಲ್ಲದೆ ಯಾವುದೇ ರೀತಿಯ ಋಣಾತ್ಮಕ ಛಾಯೆಯೊಂದಿಗೆ ಯಾರನ್ನೇ ಆಗಲಿ ಅವಮಾನಿಸಬೇಕೆಂದಾಗಲಿ ಅಥವಾ ಟೀಕಿಸುವುದಾಗಲಿ ಅಲ್ಲ. ಇದರ ಮೇಲೂ ನನ್ನ ಅರಿವಿಲ್ಲದೆ ಎಲ್ಲಿಯಾದರೂ ಎಡವಿದ್ದು ಅದರಿಂದ ಯಾರಿಗಾದರು ಕಿಂಚಿತ್ ಕೆಡುಕೆನಿಸಿದರೂ ಅವರು ಅದನ್ನು ಗಹನವಾಗಿ ಪರಿಗಣಿಸದೆ ವಿಶಾಲ ಮನಸ್ಸಿನಿಂದ ಕ್ಷಮಿಸುವರೆಂಬ ಅಚಲ ನಂಬಿಕೆಯೊಂದಿಗೆ ಪ್ರಸ್ತುತ ಪಡಿಸುತ್ತಿದ್ದೇನೆ.

ನನ್ನ ಅನುಭವಗಳನ್ನು ಬರವಣಿಗೆಯ ಮೂಲಕ ವ್ಯಕ್ತಪಡಿಸಲು ಆಗಾಗ್ಗೆ ಪ್ರೇರೇಪಿಸುತ್ತಿದ್ದ ಶ್ರೀಮತಿ ವತ್ಸಲಾ ಜಗನ್ನಾಥ್‌ರವರಿಗೆ ನನ್ನ ನೆನಪುಗಳು.

ಆಕರ್ಷಕವಾದ ಮುಖಪುಟವನ್ನು ವಿನ್ಯಾಸಿಸಿದ ನನ್ನ ಪುತ್ರ ಚಿರಂಜೀವಿ ಆಕಾಶ್‌ಗೆ ನನ್ನ ಆಶೀರ್ವಾದ.

ಸರಿ, ಬನ್ನಿ ನನ್ನ ಪ್ರಯಾಣದ ಸಂಕ್ಷಿಪ್ತ ಅನುಭವ ಹಾಗೂ ಅನಿಸಿಕೆಗಳನ್ನು ಅವಲೋಕಿಸಲು. ತರುವಾಯ, ಮರೆಯದೆ ನಿಮ್ಮ ಅಮೂಲ್ಯವಾದ ಪಾರದರ್ಶಕ ಅಭಿಪ್ರಾಯಗಳನ್ನು ತಿಳಿಸುವಿರೆಂಬ ದೃಢವಾದ ನಂಬಿಕೆಯೊಂದಿಗೆ,

ನಿಮ್ಮ ಸಹಪಯಣಿಗ,
**ಎಸ್. ಮೋಹನ್**

# ಕೃತಜ್ಞತೆಗಳು

ಈ ಕಾದಂಬರಿಯ ಹಸ್ತಪ್ರತಿಯನ್ನು ಕೂಲಂಕಷವಾಗಿ ಪರಾಂಬರಿಸಿ ಸೂಕ್ತವಾದ ಸಲಹೆ ಹಾಗೂ ಮಾರ್ಗದರ್ಶನವಿತ್ತ ಶ್ರೀಯುತ ರಮೇಶ್ ಮುತ್ತೂರ್ ಹಾಗೂ ಶ್ರೀಯುತ ರಾಮಗೋಪಾಲ್‌ರವರಿಗೆ ನಾನು ಕೃತಜ್ಞನಾಗಿದ್ದೇನೆ.

**ಎಸ್. ಮೋಹನ್**

# ಮುನ್ನುಡಿ

ಭೂಮಿಯ ಮೇಲೆ ನಿಂತು ನಕ್ಷತ್ರಗಳನ್ನು ವೀಕ್ಷಿಸುತ್ತಿದ್ದ ಈ ಹುಡುಗನಿಗೆ ತನ್ನ ಗುರಿ ಆ ಎತ್ತರಕ್ಕೆ ತಕ್ಕುದಾಗಿರಬೇಕು ಎನ್ನುವ ಸಂಕಲ್ಪ ಅಂದೇ ಅಂತರ್ಗತವಾಗಿದ್ದಿರಬೇಕು.

ನಿರಂತರ ಪಯಣಿಗನಾದ ಈ ಕಥಾನಾಯಕನ ಬದುಕು ತೆರೆದಿಟ್ಟ ಪುಸ್ತಕದಂತೆ. ಶೂನ್ಯದಿಂದ ಶಿಖರವೇರಲು ಎದುರಾದ ಬಂಡೆಗಳನ್ನು ನಾಜೂಕಾಗಿ ಹಿಡಿದು ಗುರಿ ಮುಟ್ಟಿದ ಚಾರಣಿಗ. ನೂರಾರು ಉಳಿಪೆಟ್ಟು ತಿಂದು ಒಂದು ಸುಂದರ ಆಕೃತಿ ಮೂಡುವಂತೆ ಅನಿರೀಕ್ಷಿತ ಸಮಸ್ಯೆಗಳನ್ನು ಸಂಯಮದಿಂದ ಸ್ವೀಕರಿಸಿ ಕೌಟುಂಬಿಕ ಸಾಮರಸ್ಯವನ್ನು ಕಾಯ್ದುಕೊಳ್ಳಲು ಹೆಣಗಿದ ಹೃದಯವಂತ. ಆಸೆ, ಆಕಾಂಕ್ಷೆ ಮತ್ತು ಆತಂಕಗಳಲ್ಲೇ ಅರಳಿನಿಂತ ಧೀಮಂತ.

ಅತೀ ಸಣ್ಣ ವಯಸ್ಸಿನಲ್ಲೇ ಮಣಭಾರದ ಹೊಣೆ ಹೊತ್ತು ಜಾಣ್ಮೆಯಿಂದ ನಿಭಾಯಿಸಿ ಹತ್ತು ಹಲವು ಕಡೆ ಮಾಡಿದ ದುಡಿತದ ಪರಿಣಾಮ ಬಂದೊದಗಿದ ದೈಹಿಕ, ಮಾನಸಿಕ ಹಿಂಸೆಯನ್ನು ಹಿಮ್ಮೆಟ್ಟಿ ಅನುಭವಗಳನ್ನು ವಿಸ್ತೃತಗೊಳಿಸಿಕೊಂಡು ದಿಟ್ಟತನ ಮೆರೆದ ಧೀರನ ಕಥೆಯಿದು. ಬಡತನದಲ್ಲಿ ಕಂಡ ಅಸ್ಪೃಶ್ಯತೆ ಅಸಮಾನತೆಗಳನ್ನು ಅನುಭವಿಸಿದರೂ ನಿಷ್ಕಲ್ಮಷ ನಗೆ ಬೀರಿ, ಛಲವೊಂದೇ ತನ್ನ ಗುರಿಗೆ ಸಾಧನೆ ಎಂದು ಬಗೆದ ಸಿದ್ಧಪುರುಷನ ಸಾರ್ಥಕ ಬದುಕು.

ಹತ್ತೂ ಜನಕ್ಕೆ ಒಳ್ಳೆಯದಾಗುವ ರೀತಿಯಲ್ಲಿ ತನ್ನ ಸಿದ್ಧಾಂತ ತತ್ವಗಳನ್ನು ಬದಿಗಿರಿಸಿ ಅನೂಹ್ಯ ತಿರುವುಗಳಲ್ಲಿ ಆಕಸ್ಮಿಕವಾಗಿ ಏಳುವ ಸಂಬಂಧಗಳ ನಡುವಿನ ಅಂತರಗಳು, ವ್ಯಕ್ತಿಗಳ ನಡುವಿನ (ಅ)ಸಹಜ ಸ್ವಭಾವಗಳು, ಅಂತರಂಗದ ತುಮುಲಗಳನ್ನು ಸೂಕ್ಷ್ಮ ವಿವರಗಳೊಂದಿಗೆ ಅಕ್ಷರ ರೂಪದಲ್ಲಿಟ್ಟಾಗ, ಪ್ರತಿಯೊಬ್ಬ ಸಹೃದಯ ಓದುಗನಿಗೆ ಅಲೌಕಿಕ ಅನುಭವವಾಗಿ ಈ ಕಥೆ ನನ್ನದೇ ಎನ್ನುವಷ್ಟರ ಮಟ್ಟಿಗೆ ಸಹಜತೆ, ಸರಳತೆಯಿಂದ ಈ ಬರವಣಿಗೆ ಆಪ್ತವಾಗುತ್ತದೆ. ತುರ್ತು

ಸಂದರ್ಭಗಳಲ್ಲಿ ಸಮಯೋಚಿತವಾಗಿ ಸಹಾಯ ಹಸ್ತ ಚಾಚಿ ಮಾನವೀಯತೆ ಮೆರೆದ ಮಹಾನ್ ಪುರುಷರಿದ್ದಾರೆ ಇಲ್ಲಿ, ಹಾಗೆಯೇ ಸಮಯಸಾಧಕತೆಯಿಂದ ಸಂಬಂಧಗಳನ್ನು ಸಡಿಲಗೊಳಿಸಬಲ್ಲ ಕುಯುಕ್ತರು ಸಹ ಇಲ್ಲಿದ್ದಾರೆ. ಸಮಾಜವೆಂದರೆ ಇದೇತಾನೆ!

ಸರಳಭಾಷೆ, ಬಂಧದೊಂದಿಗೆ ಓದಿಸಿಕೊಂಡು ಹೋಗಬಲ್ಲ ನಿರರ್ಗಳತೆ ಈ ಬರವಣಿಗೆಯ ಉದ್ದಕ್ಕೂ ಕಾಣಬಹುದಾಗಿದೆ.

**– ಶ್ರೀಕಂಠ ಗುಂಡಪ್ಪ**

ಹಿರಿಯ ರಂಗಕರ್ಮಿಗಳು, ಮೈಸೂರು.

# ಪರಿವಿಡಿ

# ಅಧ್ಯಾಯ ೧

## ಬದುಕಿನಲ್ಲೊಂದು ಮಹತ್ವದ ತಿರುವು

ಆ ದಿನ ನಾನು ಉದ್ಯೋಗ ಮಾಡುತ್ತಿದ್ದ ಕಾರ್ಖಾನೆಯ ವಲಯಕ್ಕೆ ವಿದ್ಯುತ್ಛಕ್ತಿಯು ಕೈ ಕೊಟ್ಟು ನನ್ನ ಕರ ಪಿಡಿದು ಜೀವನದ ಪಥವನ್ನೆ ಬದಲಿಸಿದ ದಿನ!

ಎಂದಿನಂತೆ ಆ ವಾರದ ಬೆಳಗ್ಗಿನ ಪಾಳಿಯ ಕೆಲಸಕ್ಕೆ ಹಾಜರಾಗಲು ಮೈಸೂರಿನ ದಕ್ಷಿಣ ದಿಕ್ಕಿನಲ್ಲಿದ್ದ ಇಂಡಸ್ಟ್ರಿಯಲ್ ಸಬರ್ಬ್‌ನಲ್ಲಿರುವ ಚಾಮುಂಡಿ ಮೈನಿಂಗ್ ಅಂಡ್ ಮಿನರಲ್ ಇಂಡಸ್ಟ್ರಿಯೊಳಗೆ ಅಡಿಯಿಡುತ್ತಿದ್ದ ಹಾಗೇ, ಕಾರ್ಖಾನೆಯ ಮೇಸ್ತ್ರಿಯವರಾದ ಶ್ರೀಯುತ ಕುಮಾರ್ ಎಂಬುವರು,

"ಮೋಹನ್ ಇವತ್ತು ಪವರ್ ಇಲ್ಲ ಬೆಳಗ್ಗಿನ ಪಾಳಿ ಬೇಡ, ಸಾಮಾನ್ಯ ಪಾಳಿಗೆ ಬಾ" ಎಂದರು.

ಅಯ್ಯೋ, ಬೆಳ್ಳಂಬೆಳಗ್ಗೆ ಎದ್ದು ತರಾತುರಿಯಲ್ಲಿ ನಿತ್ಯಕರ್ಮಗಳನ್ನು ಪೂರೈಸಿ ದೌಡಾಯಿಸಿ ಬಂದರೆ ಈ ಗತಿ ಎನಿಸಿ ಖಿನ್ನತೆಯಿಂದ ಮನೆ ಕಡೆಗೆ ಹಿಂದಿರುಗಿದೆ– ಅಮ್ಮನವರು ಕಟ್ಟಿ ಕೊಟ್ಟಿದ್ದ ಬುತ್ತಿಯನ್ನು ಕೈಯಲ್ಲಿ ಹಿಡಿದು ಕಾಲ್ನಡಿಗೆಯಲ್ಲಿ.

ಎನ್.ಐ.ಇ ಸಂಸ್ಥೆಯ ಬಳಿ ಸಾರುತ್ತಿದ್ದ ಹಾಗೆ ಸೈಕಲ್ ಸವಾರಿ ಮಾಡಿಕೊಂಡು ಬರುತ್ತಿದ್ದ ನನ್ನ ಬಾಲ್ಯ ಸ್ನೇಹಿತ ಲೋಗನಾದನ್ ಎದುರಾಗಿ "ಏನೋ ಕೆಲಸ ಇಲ್ವಾ?" ಎಂದು ಪ್ರಶ್ನಿಸಿದ.

ನಾನು ವಿಷಯ ತಿಳಿಸಿ ಮನೆಗೆ ವಾಪಸ್ಸು ಹೋಗುತ್ತಾ ಇದ್ದೇನೆ ಎಂದೆ. ಅದಕ್ಕವನು "ಇವತ್ತು ಕೆಲಸಕ್ಕೇನು ಹೋಗುವುದು ಬೇಡ, ಬಾ ನನ್ನ ಜೊತೆಯಲ್ಲಿ, ನಮ್ಮ ಅಣ್ಣನಿಗೆ ಸರ್ಕಾರಿ ಸಿ.ಪಿ.ಸಿ ತಾಂತ್ರಿಕ ವಿದ್ಯಾಲಯದಿಂದ ಅರ್ಜಿ ತರಲು ಹೋಗುತ್ತಿದ್ದೇನೆ" ಎಂದ.

ಇಷ್ಟವಿಲ್ಲದ ಮನಸ್ಸಿನಲ್ಲಿ ಬುತ್ತಿಯನ್ನು ಮನೆಯಲ್ಲಿಟ್ಟು ಆತನೊಡನೆ ಹೊರಟೆ ಸೈಕಲ್ ಮೇಲೆ ಡಬ್ಬಲ್ಸ್‌ನಲ್ಲಿ, ಏಕೆಂದರೆ ಆ ದಿನದ ಕೂಲಿಗೆ ಖೋತಾ!

ಅರ್ಜಿ ಕೊಳ್ಳುವಾಗ ಅವನೆಂದ, "ನೀನು ಒಂದು ತಗೊಳ್ಳೋ," "ಇಲ್ಲಪ್ಪಾ ಮನೆಯವರಿಗೆ ನನ್ನನ್ನು ಓದಿಸಲು ಸಾಧ್ಯವಿಲ್ಲ ಬೇಡಾ" ಎಂದೆ. ಅದಕ್ಕವನು "ಅರ್ಜಿ ಭರ್ತಿ ಮಾಡಿ ಕೊಟ್ಟಾಕ್ಷಣ ನಿನ್ನನ್ನೇನು ಸೇರಿಸಿಕೊಳ್ಳುವುದಿಲ್ಲಾ, ಸುಮ್ಮನೆ ಅರ್ಜಿ ಹಾಕು" ಎಂದ.

ಅರ್ಜಿಯ ವಿಚಾರ ತಮ್ಮ ಗಮನಕ್ಕೆ ಬಂದೊಡನೆ ತಂದೆಯವರು, "ನಿನ್ನನ್ನೋದಿಸಲು ಎಲ್ಲಿಂದ ತರಲಿ ದುಡ್ಡನ್ನು? ನೀನು ಓದಿ ಉದ್ಧಾರವಾಗುವುದು ಅಷ್ಟರಲ್ಲೇ ಇದೆ, ಸುಮ್ಮನೆ ಅರ್ಜಿ ಗಿರ್ಜಿ ಎಂದು ಕಾಲಹರಣ ಮಾಡಬೇಡ, ಅದೂ ಅಲ್ಲದೆ ಅಲ್ಪ ಸ್ವಲ್ಪ ದುಡ್ಡು ಬೇರೆ ದಂಡ ಅರ್ಜಿ ಹಾಕಲು, ತೆಪ್ಪಗೆ ಕೆಲಸಕ್ಕೆ ಹೋಗು" ಎಂದರು.

ಅಮ್ಮನವರು ಕಣ್ಣುಗಳಲ್ಲಿ ನೀರು ತುಂಬಿಕೊಂಡು, ಏನೋ ಮಗ ಆಸೆ ಪಡುತ್ತಿದ್ದಾನೆ, ಅರ್ಜಿಗೆ ಸಹಿ ಮಾಡಿ. ಆಮೇಲೆ ಜಾತಿ ಪ್ರಮಾಣ ಪತ್ರ, ವಾರ್ಷಿಕ ವರಮಾನ ಧೃಡೀಕರಣ ಪತ್ರ ಮುಂತಾದವುಗಳಿಗೆ ಸ್ವಲ್ಪ ಹಣ ಬೇಕಂತೆ. ಎಲ್ಲಿಂದಲಾದರು ಹೊಂದಿಸಿ ಕೊಡಿ ಎಂದರು. ತಂದೆಯವರು ಒಲ್ಲದ ಮನಸ್ಸಿನಿಂದ ಮುನಿಸಿಕೊಂಡೇ ಏನಾದರು ಮಾಡಿಕೊಂಡು ಹಾಳಾಗಿ ಹೋಗು ಎಂದರು.

ದುಃಖದಿಂದಲೇ ಆ ವಾರ ಅರ್ಜಿಯ ಜೊತೆಯಲ್ಲಿ ಲಗತ್ತಿಸಬೇಕಾಗಿದ್ದ ಎಲ್ಲಾ ದಾಖಲೆಗಳನ್ನು ಒದಗಿಸಿಕೊಂಡ ಮೇಲೆ ಲೋಗನಾದನ್‌ನೊಡನೆ ಸಿ.ಪಿ.ಸಿ ತಾಂತ್ರಿಕ ವಿದ್ಯಾಲಯಕ್ಕೆ ಹೋಗಿ ಅರ್ಜಿ ಸಲ್ಲಿಸಿ ಬಂದೆ.

ಮುಂದೆ ಎಷ್ಟೋ ದಿನಗಳ ತರುವಾಯ ಸಿ.ಪಿ.ಸಿ ತಾಂತ್ರಿಕ ವಿದ್ಯಾಲಯದಿಂದ ನಿಗದಿತ ದಿನದಂದು ಸಂದರ್ಶನಕ್ಕೆ ಹಾಜರಾಗುವಂತೆ ಆಹ್ವಾನ ಬಂದಿತ್ತು. ಒಡನೆ ಲೋಗನಾದನ್ ಮನೆಗೆ ತೆರಳಿ ಆತನಿಗೆ ವಿಷಯ ತಿಳಿಸಿ ಅವರಣ್ಣನ ಬಗ್ಗೆ ವಿಚಾರಿಸಿದಾಗ ದುರದೃಷ್ಟವೆಂಬಂತೆ ಅವರ ಅಣ್ಣನಿಗೆ ಸಂದರ್ಶನದ ಆಹ್ವಾನ ಬಂದಿರಲಿಲ್ಲ. ಎಂಥಾ ವಿಪರ್ಯಾಸ!

ಮನೆಯಲ್ಲೋ ಬಿಗಡಾಯಿಸಿದ ವಾತಾವರಣ, ನನಗೋ ತಳಮಳ. ಸಂದರ್ಶನಕ್ಕೇನೋ ಆಹ್ವಾನ ಬಂದಿದೆ, ಆದರೆ ಮುಂದೇನು? ತಿಳಿಯಲಿಲ್ಲ..

ತಂದೆಯವರ ಮುನಿಸು ಇಳಿಯುವ ಸೂಚನೆ ಇರಲಿಲ್ಲವಾದರೂ ಯಾರಿಂದಲೋ ಪಡೆದ ಸಾಲದ ಹಣವನ್ನು ಕೊಟ್ಟರು–ಅಕಸ್ಮಾತ್ ದಾಖಲಾತಿಗೆ ಅವಕಾಶ ಸಿಕ್ಕರೆ ಇರಲಿ ಎಂದು.

ಸಂದರ್ಶನದ ಸಲುವಾಗಿ ಸಿ.ಪಿ.ಸಿ ತಾಂತ್ರಿಕ ವಿದ್ಯಾಲಯದ ಪ್ರಾಂಶುಪಾಲರ ಕಛೇರಿಯಲ್ಲಿ ಭಯದಿಂದ ಕಾಲಿಟ್ಟಾಗ ಅಲ್ಲಿನ ಅಧಿಕಾರಿಗಳು ನನ್ನ ದಾಖಲೆಗಳನ್ನು ಪರಿಶೀಲಿಸಿ, ಯಾವ ಕೋರ್ಸ್ ಬೇಕು ಎಂದರು, ಕಣ್ಣು ಬಾಯಿ ಬಿಡುವಂತಾಯಿತು. ಯಾಕೆಂದರೆ ಕೋರ್ಸ್‌ನ ಅರ್ಥ ತಿಳಿಯಲಿಲ್ಲ. ನನಗೆ ನೆನಪಿದ್ದದ್ದು ವೈದ್ಯರು ಔಷಧಿ ಕೊಡುವಾಗ ಒಂದು ಕೋರ್ಸ್ ಪೂರ್ತಿ ತೆಗೆದುಕೊಳ್ಳಬೇಕೆನ್ನುತ್ತಿದ್ದದ್ದು ಮಾತ್ರ!

ಅಷ್ಟರಲ್ಲಿ ಅಧಿಕಾರಿಗಳು ಮಾತನ್ನು ಮುಂದುವರಿಸಿದರು, ನಮ್ಮಲ್ಲಿನ ಸಿವಿಲ್ ವಿಭಾಗ ಭರ್ತಿಯಾಗಿದೆ, ಆಟೋಮೊಬೈಲ್ ಮತ್ತು ಎಲೆಕ್ಟ್ರಿಕಲ್ ವಿಭಾಗದಲ್ಲಿ ಅವಕಾಶವಿದೆ ಯಾವುದು ಬೇಕು ಎಂದರು. ತಕ್ಷಣ ಆಟೋಮೊಬೈಲ್ ಎಂದೆ, ಏಕೆಂದರೆ ತಂದೆಯವರು ಉದ್ಯೋಗ ಮಾಡುತ್ತಿದ್ದದ್ದು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಲ್ಲಿ. ಅದಕ್ಕುತ್ತರವಾಗಿ ಪಕ್ಕದಲ್ಲಿದ್ದ ಮತ್ತೋರ್ವ ಅಧಿಕಾರಿ "ನಿನಗೆ ಆಟೋಮೊಬೈಲ್ ವಿಭಾಗಕ್ಕೆ ದಾಖಲಾಗಲು ಅರ್ಹತೆ ಇಲ್ಲ, ಏಕೆಂದರೆ ಕೋರ್ಸ್ ಮುಗಿಯುವಾಗ್ಗೆ ನೀನು ಚಾಲಕರ ರಹದಾರಿ ಪಡೆಯಲು ಪ್ರಾಪ್ತ ವಯಸ್ಕನಾಗಿರುವುದಿಲ್ಲ" ಎಂದರು. ಉಳಿದದ್ದು ಎಲೆಕ್ಟ್ರಿಕಲ್ ವಿಭಾಗ ಮಾತ್ರ. ನನಗೋ ಧೂಳು ಸೇವಿಸಿ, ಮೂಟೆ ಹೊರುವುದು ತಪ್ಪಿದರೆ ಸಾಕಿತ್ತು ಯಾವ ಕೋರ್ಸ್ ಆದರೇನು? ಮುಂದಿನ ಮೂರು ವರ್ಷ ಜಂ ಅಂತ ವಿದ್ಯಾರ್ಜನೆಯ ಜೀವನ ಸವಿಯಬಹುದೆಂದು ಮನಸ್ಸು ಮಂಡಿಗೆ ಹಾಕಿತ್ತು!

ದಾಖಲಾತಿ ಮುಗಿದ ವಾರಾಂತ್ಯದಲ್ಲಿ ತಂದೆಯವರೊಂದಿಗೆ ದಿನಸಿ ಹಾಗೂ ತರಕಾರಿ ತರಲೆಂದು ದೇವರಾಜ ಮಾರುಕಟ್ಟೆಗೆ ಹೋಗಿದ್ದಾಗ, ನನ್ನನ್ನು ಶಿವರಾಂ ಪೇಟೆಯಲ್ಲಿರುವ ಶ್ರೀ ಪಾಂಡುರಂಗ ಪವರ್ ಪ್ರೆಸ್‌ಗೆ ಕರೆದುಕೊಂಡು ಹೋದರು, ತನ್ನ ಮಗನಿಗೆ ಪಾಲಿಟೆಕ್ನಿಕ್‌ನಲ್ಲಿ ಸೀಟು ಸಿಕ್ಕಿರುವ ವಿಚಾರವನ್ನು ತಮ್ಮ ಸ್ನೇಹಿತರೊಂದಿಗೆ ಹಂಚಿಕೊಳ್ಳಲು. ವಿಷಯ ತಿಳಿದ ತಂದೆಯವರ ಸ್ನೇಹಿತರೊಬ್ಬರು ಪ್ರತಿಕ್ರಿಯಿಸಿದರು, ಅಯ್ಯೋ ಶಂಕ್ರಣ್ಣ, ಪಾಲಿಟೆಕ್ನಿಕ್‌ಗೆ ಯಾಕೆ ಸೇರಿಸಿದೆ ಮೂರು ವರ್ಷ ಕಾಯಬೇಕು ಕೆಲಸಕ್ಕೆ ಸೇರಲು, ಐ.ಟಿ.ಐ ಗೆ ಸೇರಿಸಿದ್ದರೆ ಒಂದುವರೆ ಎರಡು ವರ್ಷದಲ್ಲಿ ಕೆಲಸಕ್ಕೆ ಸೇರಬಹುದಿತ್ತಲ್ಲಾ ಎಂದು!

ವ್ಯಾಸಂಗದ ಆ ಮೂರು ವರ್ಷಗಳ ಅವಧಿ ನನ್ನ ಬದುಕಿನಲ್ಲಿನ ಅತ್ಯಮೂಲ್ಯ ಘಳಿಗೆ. ಎಲ್ಲೋ ಕೇಳಿದ್ದು, ವಿದ್ಯಾರ್ಜನೆಯ ಜೀವನ ಬಂಗಾರದ ಜೀವನ ಎಂದು. ಅದನ್ನು ಅಕ್ಷರಶಃ ಅನುಭವಿಸುವ ಸೌಭಾಗ್ಯ ನನ್ನದಾಗಿತ್ತು!

ತರಗತಿಯಲ್ಲಿ ಮೊದಲೆರಡು ತಿಂಗಳು ಏನೂ ಅರ್ಥವಾಗುತ್ತಿರಲಿಲ್ಲ. ಎಲ್ಲಾ ಪಾಠ ಪ್ರವಚನಗಳು ಆಂಗ್ಲ ಮಾಧ್ಯಮದಲ್ಲಿ, ನಾನೋ ಕನ್ನಡ ಮಾಧ್ಯಮದ ವಿದ್ಯಾರ್ಥಿ ಎಸ್.ಎಸ್.ಎಲ್.ಸಿ ಯವರೆಗೆ. ಆನಂತರ ಒಂದು ವರ್ಷದ ಅವಧಿಯ ವನವಾಸ! ಓದಿದ್ದೆಲ್ಲಾ ಮರೆಯುವ ಹಂತಕ್ಕೆ ಬಂದು ಬಹಳ ಸಮಯವಾಗಿತ್ತು.

ಆರು ತಿಂಗಳ ಆಸುಪಾಸು, ತರಗತಿಯಲ್ಲಿನ ಸಹಪಾಠಿಗಳಲ್ಲಿ ಶೇಷಗಿರಿ ಮತ್ತು ರಾಮಗೋಪಾಲ ಎಂಬುವರೊಡನೆ ಸ್ನೇಹ ಗಾಢವಾಗಿ, ಶೇಷಗಿರಿಯ ಮನೆಯಲ್ಲಿ ಮೂವರು ಒಟ್ಟಿಗೆ ಪಠ್ಯವನ್ನು ಅಭ್ಯಾಸಿಸುವ ಪ್ರಕ್ರಿಯೆ ಆರಂಭವಾಗಿತ್ತು. ಅವರಿಬ್ಬರು ಅಭ್ಯಾಸದ ವೇಳೆಯಲ್ಲಿ ಪಠ್ಯದ ವಿಷಯಗಳ ಬಗ್ಗೆ ಸುದೀರ್ಘವಾಗಿ ಹಾಗು ಕೂಲಂಕಷವಾಗಿ ಚರ್ಚಿಸುತ್ತಿದ್ದರೆ ನನ್ನದು ಬರೇ ಕೇಳುಗನ ಸ್ಥಿತಿ!

ಕೇಳಿಸಿಕೊಂಡಿದ್ದರಲ್ಲಿ ನನಗೆ ಅರ್ಥವಾಗದಿದ್ದ ವಿಷಯಗಳ ಬಗ್ಗೆ ಸಂಯಮದಿಂದ ವಿವರಿಸಿ ಅರ್ಥ ಮಾಡಿಸಿ ಮುಂದುವರೆಯುತ್ತಿದ್ದ ಅವರ ಪರಿಗೆ ನನಗನ್ನಿಸಿದ್ದು; ವ್ಯಾಸಂಗವೆನ್ನುವ ಸುಂದರ ವನದಲ್ಲಿ ಅಂಧನ ತೆರದಿ ತಡವರಿಸುತ್ತಾ ಅಡ್ಡಾಡುತ್ತಿದ್ದವನಿಗೆ ನನ್ನೆರಡು ಕಣ್ಣುಗಳಂತೆ ಇವರಿಬ್ಬರು ನನ್ನಲ್ಲಿ ಪರಕಾಯ ಪ್ರವೇಶ ಮಾಡಿ ನನಗೆ ದೃಷ್ಟಿಭಾಗ್ಯ ಕೊಟ್ಟು ವ್ಯಾಸಂಗವೆಂಬ ವನದ ಸೌಂದರ್ಯವೆಲ್ಲವನ್ನು ಆಸ್ವಾದಿಸುವಂತೆ ಮಾಡಿದರೆಂದು.

ಹಿರಿಯರು ಹೇಳುವ ಹಾಗೇ ಹೂವಿನೊಂದಿಗೆ ನಾರು ಸ್ವರ್ಗಕ್ಕೆ ಸೇರಿದಂತೆ ಇವರಿಬ್ಬರ ನಿಸ್ವಾರ್ಥ ಸಹಕಾರದಿಂದ ನಾನೂ ಯಶಸ್ವಿಯಾಗಿ ವ್ಯಾಸಂಗ ಮುಗಿಸುವಂತಾಯಿತು.

ವ್ಯಾಸಂಗದ ಅವಧಿಯಲ್ಲಿ ನಾನು ಖರೀದಿ ಮಾಡಿದ್ದ ಒಂದೇ ಒಂದು ಪಠ್ಯ ಪುಸ್ತಕ ಎಂದರೆ, ಬಿ.ಎಲ್. ತೆರೇಜಾ ವಿರಚಿತ ಎಲೆಕ್ಟ್ರಿಕಲ್ ಎಂಜಿನಿಯರಿಂಗ್ ಭಾಗ–೨ ಮಾತ್ರ! ಮಿಕ್ಕಿದ್ದೆಲ್ಲವೂ ಶೇಷಗಿರಿ ಮತ್ತು ರಾಮಗೋಪಾಲರ ಕೃಪಾಕಟಾಕ್ಷ!

ಸರಿಸುಮಾರು ಎರಡೂವರೆ ವರ್ಷಗಳು ನನ್ನ ನೆಲೆ ಶೇಷಗಿರಿಯ ಮನೆಯಲ್ಲೇ, ನಿತ್ಯಕರ್ಮಗಳನ್ನು ಪೂರೈಸಲಷ್ಟೇ ನಮ್ಮ ಮನೆಗೆ ಬರುತ್ತಿದ್ದದ್ದು. ಆತನ ಮನೆಯವರಂತೂ ನನ್ನನ್ನು ಸಹ ಅವರ ಕುಟುಂಬದ ಸದಸ್ಯನೆಂಬಂತೇ ಪರಿಗಣಿಸಿ ಆದರಿಸುತ್ತಿದ್ದರು.

ವ್ಯಾಸಂಗದ ಅವಧಿಯಲ್ಲಿ ಪ್ರತಿ ದಿನ ಪ್ರಾತಃಕಾಲ ಶೇಷಗಿರಿಯೊಡನೆ ನಾನೂ ಆತನ ಸೈಕಲ್ಲನ್ನೇರಿ ಚಾಮುಂಡಿ ಬೆಟ್ಟದ ಬುಡವನ್ನು ತಲುಪಿ ನಂತರ ಬಸವನ ತನಕ ಮೆಟ್ಟಿಲುಗಳನ್ನು ಹತ್ತಿ ಒಂದಿಷ್ಟು ಹೊತ್ತು ವ್ಯಾಯಾಮ ಮಾಡಿ, ಕೊಂಡೊಯ್ದ

ನಾಲ್ಕು ಹಸೀ ಕೋಳಿಮೊಟ್ಟೆಗಳಲ್ಲಿ ತಲಾ ಎರಡೆರಡು ಕುಡಿದು ಬೆಟ್ಟದಿಂದ ಇಳಿಯುತ್ತಿದ್ದೆವು.

ವ್ಯಾಯಾಮ ಹಾಗೂ ಬೆಟ್ಟ ಹತ್ತಿ ಇಳಿದುದ್ದರ ಫಲವಾಗಿ ಮೈಯೆಲ್ಲಾ ಬೆವರಿಳಿದು ಏದುಸಿರು ಬಿಡುವ ಸ್ಥಿತಿಯಲ್ಲಿ ಮತ್ತೆ ಸೈಕಲ್ಲನ್ನೇರಿ ಮನೆಗೆ ಹಿಂದಿರುಗುವಾಗ ಎದುರುಮುಖವಾಗಿ ಬೀಸುವ ತಂಗಾಳಿಗೆ ಮೈಯೆಲ್ಲಾ ಆರಿ ದೇಹ ಹಗುರವಾಗಿ ತೇಲುವ ಸ್ಥಿತಿಯ ಅನುಭವವದ ಆನಂದ ಸವಿದವರೇ ಬಲ್ಲರು!

ಸಾಮಾನ್ಯವಾಗಿ ಭಾನುವಾರದಂದು ನಮ್ಮಿಬ್ಬರೊಡನೆ ರಾಮಗೋಪಾಲನೂ ಸೇರಿ ಬೆಟ್ಟವನ್ನು ಮೆಟ್ಟಿಲುಗಳ ಮೂಲಕ ಹತ್ತದೇ ಗುಡ್ಡದ ಮುಖೇನ ಹತ್ತಿ ಸಂತೋಷಿಸುತ್ತಿದ್ದೆವು. ದುರ್ಗಮ ಹಾದಿಯಲ್ಲಿ ಸಾಗುತ್ತಿರುವಾಗ ರಾಮಗೋಪಾಲನು ವಿವಿಧ ಹಕ್ಕಿಗಳ ಧ್ವನಿಯನ್ನು ಅಣಕಿಸಿ ಅವುಗಳಿಂದ ಪ್ರತ್ಯುತ್ತರ ಗಳಿಸಿದಾಗ ನಮ್ಮ ಆನಂದ ಎಲ್ಲೆ ಮೀರಿ ಬೆಟ್ಟ ಹತ್ತುವ ಕಸರತ್ತಿನ ಪ್ರಯಾಸವನ್ನು ಮರೆಯುವಂತೆ ಮಾಡುತ್ತಿತ್ತು.

ದಾರಿಯುದ್ದಕ್ಕೂ ಅವರಿಬ್ಬರು ಪಠ್ಯೇತರ ವಿಚಾರಗಳ ಹಾಗೂ ಪ್ರಸ್ತುತ ವಿದ್ಯಮಾನಗಳ ಬಗ್ಗೆ ನಡೆಸುತ್ತಿದ್ದ ಚರ್ಚೆ ನನ್ನ ಜ್ಞಾನವೃಧ್ಧಿಗೆ ಬಹು ಸಹಾಯಕವಾಗುತ್ತಿತ್ತು.

ವ್ಯಾಸಂಗದ ಅವಧಿಯ ಅಂತಿಮ ಘಟ್ಟಕ್ಕೆ ಬಂದು ತಲುಪಿದ್ದೆವು. ಪರೀಕ್ಷೆ ಎದುರಿಸಲು ಸಿದ್ಧತೆ ಭರದಿಂದ ಸಾಗಿತ್ತು.

ವಾಡಿಕೆಯಂತೆ ಆ ವರ್ಷದ ವಿದ್ಯಾರ್ಜನೆಯ ಪ್ರವಾಸದ ಬಗ್ಗೆ ಮಾಹಿತಿಯನ್ನು ಪ್ರಕಟಿಸಿದ್ದರು. ೧೯ ದಿನಗಳ ಪ್ರವಾಸ, ಅಖಂಡ ಭಾರತವನ್ನು ಸುತ್ತಿ ಬರುವುದು, ರೂಪಾಯಿ ಒಂದು ಸಾವಿರಕ್ಕೂ ಮಿಕ್ಕಿದ ಖರ್ಚು! ಎರಡು ಕಂತಿನಲ್ಲಿ ಕಟ್ಟಬೇಕಿತ್ತು.

ಒಂದು ಕ್ಷಣ ನನಗೂ ಆಸೆ ಉಕ್ಕೇರಿತ್ತು ಆದರೆ ಮನೆಯಲ್ಲಿನ ಪರಿಸ್ಥಿತಿ ನನ್ನ ಆ ಆಸೆಗೆ ನಿರ್ದಾಕ್ಷಿಣ್ಯವಾಗಿ ತಣ್ಣೀರೆರೆಚಿತ್ತು. ಶೇಷಗಿರಿ ಮತ್ತು ರಾಮಗೋಪಾಲರು ತಮ್ಮೊಂದಿಗೆ ನಾನೂ ಪ್ರವಾಸಕ್ಕೆ ಬರುವೆನೆಂದು ತಿಳಿದಿದ್ದಾರೆಂಬ ವಿಚಾರ ಅರಿತಿದ್ದರೂ ನನಗೆ ನಮ್ಮ ಮನೆಯ ಹಣಕಾಸಿನ ವಾಸ್ತವಾಂಶವನ್ನು ಅವರಿಗೆ ತಿಳಿಸಲು ಮನಸ್ಸು ಹಿಂಜರಿದು ನಿರ್ವಾಹವಿಲ್ಲದೇ ಸುಳ್ಳು ಹೇಳಿದ್ದೆ, ತಂದೆಯವರು ದುಡ್ಡನ್ನು ಹೊಂದಿಸುವರೆಂದು!

ಮೊದಲನೆಯ ಕಂತಿನ ಬಾಬ್ತು ೨೫೦ ರೂಪಾಯಿಗಳನ್ನು ಜಮಾ ಮಾಡುವ ದಿನ ಬಂತು, ಅವರಿಬ್ಬರು ಕೇಳಿದರು ದುಡ್ಡು ತಂದ್ಯಾ ಎಂದು ನಾನೆಂದೆ ತಂದೆಯವರು

ಇನ್ನೂ ಹೊಂದಿಸಿಲ್ಲಾ ಪ್ರಯತ್ನ ಪಡುತ್ತಿದ್ದಾರೆಂದು. ಆಗ ರಾಮಗೋಪಾಲನೇ ನನ್ನ ಪಾಲಿನ ಕಂತಿನ ಹಣವನ್ನು ಜಮಾ ಮಾಡಿ, ತಂದೆಯವರು ಹೊಂದಿಸಿದ ಮೇಲೆ ಕೊಡುವೆಯಂತೆ ಎಂದ. ನಾನಂತು ಪೆಚ್ಚಾದೆ– ಏಕೆಂದರೆ ದುಡ್ಡು ಹೋದಂತೇ, ನನ್ನಿಂದಲ್ಲಂತೂ ಹಿಂದಿರುಗಿಸಲು ಸಾಧ್ಯವಿಲ್ಲವೆಂದು.

ದಿನಗಳುರುಳುತ್ತಿದ್ದವು ಬಹು ವೇಗವಾಗಿ, ಎರಡನೇ ಕಂತಿನ ಬಾಬ್ತು ೭೫೦ ರೂಪಾಯಿ ಕಟ್ಟಬೇಕಾಗಿದ್ದ ಹಿಂದಿನ ರಾತ್ರಿ ನಮ್ಮ ಓದು ಯಥಾವತ್ತಾಗಿ ಸಾಗಿತ್ತು ಶೇಷಗಿರಿಯ ಮನೆಯಂಗಳದಲ್ಲಿ.

ರಾಮಗೋಪಾಲ ನೆನಪಿಸಿದ, ನಾಳೆ ದುಡ್ಡು ಕಟ್ಟಬೇಕಲ್ವಾ? ಎಂದು. ಶೇಷಗಿರಿಯು ಹೌದೆನ್ನುವಂತೆ ತಲೆಯಾಡಿಸಿದ ನಂತರ ನನ್ನ ಕಡೆಗೆ ತಿರುಗಿ ಮೋಹನಾ, ನಾಳೆ ದುಡ್ಡು ತರುತ್ತೀಯಲ್ಲಾ?" ಎಂದ. ಈಗ ನನ್ನಲ್ಲೇನು ಸಬೂಬು ಬಾಕಿ ಉಳಿದಿರಲಿಲ್ಲ, ಕಡೆಗೆ ಅಳುಕಿನಿಂದಲೇ ಉತ್ತರಿಸಿದೆ, "ನಾನು ಪ್ರವಾಸಕ್ಕೆ ಬರಲು ಆಗುವುದಿಲ್ಲಾ ಏಕೆಂದರೆ, ತಂದೆಯವರು ಗೊತ್ತಿದ್ದ ಎಲ್ಲಾ ಕಡೆ ಪ್ರಯತ್ನಿಸಿದರಂತೆ ಆದರೆ ಅವರಿಗೆ ಎಲ್ಲಿಂದಲೂ ಹೊಂದಿಸಲಾಗಲಿಲ್ಲವಂತೆ."

ಶೇಷಗಿರಿಯು, ಅಲ್ಲೇ ಮನೆಯ ಹಜಾರದಲ್ಲಿ ಕುಳಿತ್ತಿದ್ದ ಆತನ ತಾಯಿಯವರಿಗೆ ಹೇಳಿದ, "ಅಮ್ಮಾ, ಮೋಹನಾ ಟೂರ್‌ಗೆ ಬರಲ್ವಂತೆ".

ಕೇಳಿಸಿಕೊಂಡ ಅವರಿಗೆ ಎಲ್ಲಿಲ್ಲದ ಸಿಟ್ಟು. "ಯಾಕೋ ಮೋಹನಾ, ಮುಂಚೇನೇ ಈ ವಿಚಾರ ತಿಳಿಸಲಿಲ್ಲಾ? ಮೂವರು ಒಳ್ಳೇ ತ್ರಿಮೂರ್ತಿಗಳ ಹಾಗೇ ಮೂರು ವರ್ಷ ಜೊತೆಯಲ್ಲಿದ್ದು ಒಟ್ಟಿಗೆ ಓದಿ, ಈಗ ಪ್ರವಾಸದಲ್ಲಿ ನೀನಿಲ್ಲವೆಂದರೆ ಅದೇನು ಚಂದ" ಎಂದವರು ಒಳ ಕೋಣೆಗೆ ನಡೆದರು.

ಮಾರನೆಯ ದಿನ ನನಗೆ ಗೊತ್ತಾದದ್ದೇನೆಂದರೆ, ಶ್ರೀಮತಿ ಸರೋಜಮ್ಮನವರು ತಮ್ಮ ಚಿನ್ನದ ಒಡವೆಯನ್ನು ಗಿರವಿ ಇಟ್ಟು ನನ್ನ ಭಾಗದ ಹಣವನ್ನು ಒದಗಿಸಿದ್ದರು!

ಇದು ಯಾವ ಜನ್ಮದ ಋಣಾನುಬಂಧವೋ?<br>
ಏನು ತೆತ್ತರೆ ತಾನೇ ಈ ಫಲ ಸಿಗುವುದು?<br>
ಜನ್ಮ ಜನ್ಮಾಂತರ ಕಳೆದರೂ ತೀರಿಸಲಾಗದ ಋಣ ಬಾಧೆ!<br>
ಬದುಕಿರುವವರೆಗೂ ಅದೆಷ್ಟು ಋಣಭಾರವನ್ನು ಹೊತ್ತು ಸಾಗಬೇಕೋ?

# ಅಧ್ಯಾಯ ೨

## ನೆನಪಿನಂಗಳ

ಮನಸ್ಸು ಜಿಗಿದಿತ್ತು ಎಂಟು ವರ್ಷಗಳ ಹಿಂದಕ್ಕೆ....

ಮನೆಯಲ್ಲಿ ಕಡು ಬಡತನ ತಾಂಡವವಾಡುತ್ತಿತ್ತು, ನಾವು ಬಾಡಿಗೆಗಿದ್ದ ಮನೆ, ದನದ ಕೊಟ್ಟಿಗೆಯನ್ನು ಸ್ವಲ್ಪ ಮಾರ್ಪಡಿಸಿ ಜನರು? ವಾಸಿಸಲು ಕೊಟ್ಟಿದ್ದು!

ಒಂದೂವರೆ ಚದುರ ಅಡಿ ಅಳತೆಯ ಆಯತಾಕಾರದ ಜಾಗದ ಮಧ್ಯೆ ಒಂದು ಅರೇ ಅಡ್ಡ ಗೋಡೆ, ಗೋಡೆಯ ಆಚೆ ಅಡುಗೆ ಮನೆ, ದೇವರ ಮನೆ, ಒಂದು ಮೂಲೆಯಲ್ಲಿ ಒಬ್ಬರು ನಿಲ್ಲುವಷ್ಟು ಜಾಗದಲ್ಲಿ ನೆಲದ ಮೇಲೆ ಒಂದು ವರಸೆ ಇಟ್ಟಿಗೆ ಇಟ್ಟು ಕಟ್ಟೆ ಕಟ್ಟಿ ಮಾಡಿದ್ದ ಸ್ನಾನದ ಮನೆ ಮತ್ತು ಅಪ್ಪ, ಅಮ್ಮನವರು ಮಲಗುವ ಕೋಣೆ. ಗೋಡೆಯ ಈಚೆಗೆ ಪಡಸಾಲೆ, ವೆರಾಂಡ ಹಾಗೂ ನಾವು ಮಕ್ಕಳೆಲ್ಲಾ ಮಲಗುವ ಕೋಣೆ!

ಮಂಗಳೂರು ಹೆಂಚನ್ನು ಹೊದಿಸಿದ್ದ ಮಳೆಗಾಲದಲ್ಲಿ ಸೋರುವ ಸೂರು, ಹಸುವಿನ ಸಗಣಿಯಿಂದ ಸಾರಿಸುವ ನೆಲ. ನಾನು ಎಸ್.ಎಸ್.ಎಲ್.ಸಿಯನ್ನು ಮುಗಿಸುವವರೆಗೂ ಬಾರದ ವಿದ್ಯುತ್ ದೀಪ.

ನಾಲ್ಕು ಮನೆಗಳಿದ್ದ ಆ ವಠಾರದಲ್ಲಿ ಕ್ರಮೇಣ ಹತ್ತು ಮನೆಗಳನ್ನು ಕಟ್ಟಿ ಬಾಡಿಗೆಗೆ ಕೊಟ್ಟಿದ್ದರು– ಆ ಜಾಗದ ಒಡೆಯ ಶ್ರೀಯುತ ವೆಂಕಟಪ್ಪ ಎಂಬುವರು.

ಇಡೀ ಹತ್ತು ಮನೆಗಳಿಗೆ ಎರಡು ಶೌಚಾಲಯ, ವಠಾರದಲ್ಲಿನ ಸರ್ವ ಸದಸ್ಯರ ಸ್ನಾನಕ್ಕೂ, ಅವರೆಲ್ಲರ ಬಟ್ಟೆಗಳನ್ನು ಒಗೆಯುವುದಕ್ಕೂ ಹಾಗೂ ಎಲ್ಲರ ಮನೆಯ ಪಾತ್ರೆಗಳನ್ನು ತೊಳೆಯಲು ಇದ್ದದ್ದು ಒಂದು ಬಾವಿಯ ನೀರಿನ ಆಸರೆಯ ಜೊತೆಗೆ ವಾರಕ್ಕೆ ಮೂರು ದಿನಗಳು ಮಾತ್ರ ಪೂರೈಕೆಯಾಗುತ್ತಿದ್ದ ಒಂದು ಕುಡಿಯುವ ನೀರಿನ ನಲ್ಲಿ.

ಅಂದಿನ ದಿನಗಳಲ್ಲಿ ನಾವಿದ್ದ ವಲಯದಲ್ಲಿ ಸಾಮಾನ್ಯವಾಗಿ ಮಕ್ಕಳು ಮರಿಯೆಲ್ಲಾ ಜಲಬಾಧೆ ಹಾಗೂ ದೇಹಬಾಧೆಗೆ ಶೌಚಾಲಯದ ಬಳಕೆ ಮಾಡುತ್ತಿದ್ದದ್ದು ತೀರ ಕಡಿಮೆ. ಏನಿದ್ದರೂ ಎಲ್ಲಾ ಬೀದಿಯ ಬದಿಯಲ್ಲೇ. ಹಾಗಾಗಿ ಹಿರಿಯ ಪ್ರಾಥಮಿಕ ಶಾಲೆಯ ವ್ಯಾಸಂಗ ಮುಗಿಯುವವರೆಗೂ ನಾನೂ ಇದಕ್ಕೆ ಹೊರತಾಗಿರದೆ ಬಯಲು ಶೌಚ ಮುಗಿಸಿ ನೀರಿನ ಕರ್ಮಕ್ಕೆ ಅಮ್ಮನವರ ಬಳಿ ಸಾರುತ್ತಿದ್ದೆ.

ನಾವು ವಾಸಕ್ಕಿದ್ದ ವಠಾರದ ಬೀದಿಯ ನೆರೆಹೊರೆಯವರ ಮಾತುಕತೆ ಹಾಗೂ ನಡವಳಿಕೆ ಸುಸಂಸ್ಕೃತರಿಗೆ ತರವಲ್ಲದ ಕಾರಣ ತನ್ನ ಮಕ್ಕಳೆಲ್ಲಿ ಹಾದಿ ತಪ್ಪುವರೋ ಎಂಬ ಆತಂಕದಲ್ಲಿ ತಂದೆಯವರು ನಮ್ಮ ಮೇಲೆ ಸದಾ ಹದ್ದಿನ ಕಣ್ಣಿಟ್ಟಿದ್ದು, ಅಕಸ್ಮಾತ್ ತಂದೆಯವರು ಉದ್ಯೋಗ ನಿರ್ವಹಿಸಿ ಮನೆಗೆ ವಾಪಸ್ಸಾಗುವ ಸಮಯದಲ್ಲಿ ಅಪ್ಪಿತಪ್ಪಿ ನಮ್ಮನ್ನೇನಾದರೂ ಬೀದಿಯಲ್ಲಿ ಕಂಡರೆ ಅಥವ ಯಾರಾದರೂ ಓರಿಗೆಯವರೊಂದಿಗೆ ಇದ್ದರಂತೂ ಮುಗಿಯಿತು ನಮ್ಮ ಕಥೆ! ಬೀದಿಯಿಂದಲೇ ಏಟಿನ ಪ್ರಹಾರ ಆರಂಭವಾಗಿ ಮನೆಯೊಳಗೂ ಮುಂದುವರೆಯುತ್ತಿತ್ತು. ಮಕ್ಕಳನ್ನು ತಂದೆಯವರ ಹೊಡೆತದ ಹಿಡಿತದಿಂದ ಪಾರಾಗಿಸಲು ಶ್ರಮಿಸುತ್ತಿದ್ದ ಅಮ್ಮನವರ ಯಾವುದೇ ಕಾರಣಗಳನ್ನು ಪರಿಗಣಿಸದೆ ಅವರಿಗೂ ಮಕ್ಕಳನ್ನು ಬೆಳೆಸುವ ರೀತಿ ನೀತಿಗಳ ಬಗ್ಗೆ ಕಟ್ಟೆಚ್ಚರದ ಆದೇಶವಾಗುತ್ತಿತ್ತು.

ಕ್ರಮೇಣ ಏರಿದ ವಠಾರದಲ್ಲಿನ ಜನಸಂಖ್ಯೆ ಅಲ್ಲಿ ನೆಲೆಸಿದ್ದ ಐಕಮತ್ಯಕ್ಕೆ ಧಕ್ಕೆ ತಂದು ನಿತ್ಯ, ವಠಾರದಲ್ಲಿ ಕಸ ಗುಡಿಸುವುದಕ್ಕಾಗಲಿ, ಮುಂಬಾಗಿಲಿಗೆ ನೀರು ಹಾಕಿ ರಂಗೋಲಿ ಬಿಡಿಸುವುದಕ್ಕಾಗಲಿ, ನಲ್ಲಿಯಿಂದ ನೀರು ಸಂಗ್ರಹಿಸುವುದಿರಲಿ, ಬಾವಿಯಿಂದ ನೀರು ಸೆಳೆಯುವುದಿರಲಿ, ಶೌಚಾಲಯದ ಬಳಕೆಯಿರಲಿ ಮತ್ತು ಇದ್ದ ಒಂದೇ ತುಳಸಿ ಕಟ್ಟೆಯ ಪೂಜೆ ಮಾಡುವುದಿರಲೀ ಕ್ಷುಲ್ಲಕ ಕಾರಣಕ್ಕೆ ಆಗಾಗ್ಗೆ ನಿರಂತರವಾಗಿ ನೆರೆ ಹೊರೆಯವರೊಂದಿಗೆ ಜಗಳ ಜೂಟಿ ನಡೆಯುತ್ತಿತ್ತು. ಇದರಿಂದ ಅಮ್ಮನಿಗೇ ಹೆಚ್ಚು ನೋವಾಗುತ್ತಿದ್ದು ಈ ಜಂಜಾಟದಿಂದ ವಿಮುಕ್ತಿ ಯಾವಾಗಲೋ ಎಂದು ವ್ಯಥೆ ಪಡುತ್ತಿದ್ದರು. ಕಡೆಗೆ ಕುಡಿಯುವ ನೀರಿನ ಪಾಲಿಗಾಗಿ ಆಗುತ್ತಿದ್ದ ಜಗಳವನ್ನಾದರೂ ತಪ್ಪಿಸಿಕೊಳ್ಳಲೆಂಬಂತೆ ಆಗಾಗ್ಗೆ ಮಧ್ಯರಾತ್ರಿಯಲ್ಲಿ ನಮ್ಮ ಮನೆಯಿಂದ ಮೂರು ಫರ್ಲಾಂಗ್‌ನಷ್ಟು ದೂರವಿದ್ದ ಚಾಮುಂಡಿವನದ ಸಮೀಪದಲ್ಲಿದ್ದ ಬೀದಿ ನಲ್ಲಿಯಿಂದ ಅಪ್ಪ ಅಮ್ಮ ಹಾಗೂ ನಾನು, ಜೊತೆಗೆ ನನ್ನ ತಮ್ಮ ಅಷ್ಟಷ್ಟು ದೂರಕ್ಕೆ ನಿಂತು ನೀರು ತುಂಬಿದ ಕೊಡ ಮತ್ತು ಬಕೆಟ್‌ಗಳನ್ನು ಮನೆ ತಲುಪಿಸುತ್ತಿದ್ದೆವು.

ತಂದೆಯವರ ಆದಾಯದಲ್ಲಿ ಏಳು ತುತ್ತಿನ ಚೀಲಗಳು ತುಂಬಬೇಕಾಗಿದ್ದ ಕಾಲವದು. ಬೆಳಗ್ಗಿನ ತಿಂಡಿಗೆ ರಾಗಿಯ ರೊಟ್ಟಿ, ದೋಸೆ ಅಥವಾ ಉಪ್ಪಿಟ್ಟು, ಇಲ್ಲ ಜೋಳದ ರೊಟ್ಟಿ. ಮಧ್ಯಾಹ್ನ ಹಾಗು ರಾತ್ರಿಯ ಊಟಕ್ಕೆ ರಾಗಿ ಅಥವ ಜೋಳದ ಮುದ್ದೆ, ತಿಳೀ ಸಾರು ಇಲ್ಲಾ ನೀರಿಗೆ ಹುಣಿಸೇಹಣ್ಣು ಕಿವುಚಿ ಒಂದಿಷ್ಟು ಈರುಳ್ಳಿ, ಹಸೀಮೆಣಸಿನ ಕಾಯಿಗಳನ್ನು ಹೆಚ್ಚಿ ಹಾಕಿ ಉಪ್ಪು ಬೆರೆಸಿದ ಗೊಡ್ಡು ಸಾರನ್ನು ದಿನಂಪ್ರತಿ ತಿನ್ನುವಾಗ ವಾಕರಿಕೆಯಾಗುತ್ತಿತ್ತು.

ತರಕಾರಿಯಂತೂ ಅಮಾವಾಸ್ಯೆಗೋ ಹುಣ್ಣಿಮೆಗೋ ಒಮ್ಮೆ ನಮ್ಮ ಒಡಲು ಸೇರುತ್ತಿತ್ತು. ಬೇಳೇ ಕಾಳುಗಳಂತೂ ಅಡುಗೆ ಮನೆಯ ಹತ್ತಿರ ಸುಳಿಯುತ್ತಿರಲಿಲ್ಲ. ಅನ್ನವೆಂಬುದು ಕೈಗೆಟುಕದ ಗಗನ ಕುಸುಮ, ಯಾವಾಗಲಾದರೊಮ್ಮೆ ಒಂದೇ ಒಂದು ತುತ್ತು ಅನ್ನ ಇರುತ್ತಿತ್ತು ಊಟದಲ್ಲಿ. ಆಗೆಲ್ಲಾ ಊಟ ತಿಂಡಿಗೆ ಕುಳಿತರೆ ಸಂಕಟದಿಂದ ಕಣ್ಣೀರು ಧಾರಾಕಾರವಾಗಿ ಹರಿಯುತ್ತಿತ್ತು.

ಗ್ರಾಮೀಣ ಜನರ ನಾಣ್ಣುಡಿಯಂತೆ ಹೊಟ್ಟೆ ತುಂಬಾ ಹಿಟ್ಟು, ಬಾಯಿ ತುಂಬಾ ಅನ್ನದ ಹಾಗೆ ನಮ್ಮ ಜೀವನ ಸಾಗಿತ್ತು.

ಶಾಲೆಯಲ್ಲಿ ಸಹಪಾಠಿಗಳು ತರಾವರೀ ತಿಂಡಿಗಳು ತುಂಬಿದ್ದ ಬುತ್ತಿಯನ್ನು ತರುವುದನ್ನು ಕಂಡು ನಾನು ಮನೆಯಲ್ಲಿ ತಾಕೀತು ಮಾಡುತ್ತಿದ್ದೆ ನನಗೂ ಬುತ್ತಿ ಕಟ್ಟಿ ಕೊಡಿ ಎಂದು. ಆ ನೆಪದಲ್ಲಾದರೂ ಬೇರೇ ಅಡುಗೆ ಮಾಡಬಹುದೆಂದು! ಆದರೆ ಅದು ಬರೀ ಕನಸು..

ನಮ್ಮ ನೆರೆಹೊರೆಯವರಲ್ಲಿ ಗುಡ್ಡಪ್ಪ ಮತ್ತು ಲಕ್ಷ್ಮಮ್ಮ ಎಂಬ ಸಂತಾನವಿಲ್ಲದ ಹಿರಿಯ ದಂಪತಿಗಳಿದ್ದರು. ಶ್ರೀಯುತ ಗುಡ್ಡಪ್ಪನವರು ಕೂಲಿ ಕೆಲಸ ಮಾಡುತ್ತಿದ್ದರೆ ಶ್ರೀಮತಿ ಲಕ್ಷ್ಮಮ್ಮನವರು ನಂಜುಮಳಿಗೆಯ ಹತ್ತಿರವಿದ್ದ ಯಾರೋ ಸ್ಥಿತಿವಂತರ ಮನೆಗೆಲಸ ಮಾಡುತ್ತಿದ್ದರು.

ಕೆಲವೊಮ್ಮೆ ಸಂಜೆ ಮನೆಗೆಲಸ ಮುಗಿಸಿ ಲಕ್ಷ್ಮಮ್ಮನವರು ವಾಪಸ್ ಬರುವಾಗ ಆ ಮನೆಯವರು ಆಕೆಗೆ ಕೊಟ್ಟು ಕಳುಹಿಸುತ್ತಿದ್ದ ಉಳಿಕೆಯ ಅಡುಗೆಯನ್ನು ತಂದು ನಮ್ಮ ಮನೆಯವರೊಂದಿಗೆ ಹಂಚಿಕೊಳ್ಳುತ್ತಿದ್ದರು. ಆ ಸ್ಥಿತಿವಂತರ ಮನೆಯ ಬೇಳೆಯ ಸಾರಂತು ನಮಗೆ ಮೃಷ್ಟಾನ್ನದ ಸಮಾನ! ಆದರೆ ಅಮ್ಮನವರು ತುಂಬಾ ಗಟ್ಟಿಯಾದ ಅಲ್ಪ ಸಾರನ್ನು ಎಲ್ಲರಿಗೂ ಬರಲಿ ಎಂದು ಧಾರಾಳವಾಗಿ ಉದ್ದ ಮಾಡಿ ಬಡಿಸುವಾಗ ಮನಸ್ಸಿಗೆ ಹಿತವೆನಿಸುತ್ತಿರಲಿಲ್ಲ!

ಊರಿನಿಂದ ನೆಂಟರು, ಸಾಮಾನ್ಯವಾಗಿ ಅಮ್ಮನ ಬಳಗದವರು ಮಾತ್ರ. ಯಾವುದಾದರು ಹಬ್ಬ ಹರಿದಿನಗಳಲ್ಲಿ ನಮ್ಮ ಮನೆಗೆ ಬಂದು ಹೋಗುವಷ್ಟು ದಿನಗಳು ಮಾತ್ರ ನಮಗೆ ಭೂರೀ ಭೋಜನ. ಏಕೆಂದರೆ ಅವರಿರುವಷ್ಟು ದಿನ ಅವರೇ ಎಲ್ಲರಿಗೂ ಸಾಕಾಗುವಷ್ಟು ದವಸ ಧಾನ್ಯ ಮತ್ತು ತರಕಾರಿಯನ್ನು ತಂದು ತೂಗಿಸುತ್ತಿದ್ದರು.

ಈ ಪರಿಸ್ಥಿತಿಯಲ್ಲಿ ಎಂಟನೆಯ ತುತ್ತಿನ ಚೀಲ ನಮ್ಮನ್ನು ಸೇರಿತ್ತು ವೇಣುಗೋಪಾಲನ ರೂಪದಲ್ಲಿ. ಅಮ್ಮನವರ ಬಾಣಂತಿತನದ ಕಾರ್ಯ ತೂಗಿಸಲು ಒಂದೆರಡು ವಾರಗಳು ಮಾತ್ರ ಯಾರಾದರು ಕೆಲಸದವರನ್ನು ತಂದೆಯವರು ಗೊತ್ತು ಮಾಡುತ್ತಿದ್ದರು. ತದ ನಂತರ ತಂದೆಯವರೊಂದಿಗೆ ನಾನೂ ಸೇರಿಕೊಂಡು ಅಮ್ಮನವರು ತಣ್ಣೀರನ್ನು ಸೋಕಿಸುವ ತನಕ ಮನೆಗೆಲಸವನ್ನೆಲ್ಲಾ ನಿರ್ವಹಿಸುತ್ತಿದ್ದೆವು. ಮನೆಯವರೆಲ್ಲರ ಮಲಿನ ವಸ್ತ್ರಗಳನ್ನು ಒಗೆಯುವಾಗ ಏನನಿಸದಿದ್ದರೂ ಕೈಗೂಸಿನ ಶೌಚದ ವಸ್ತ್ರಗಳನ್ನು ಮಡಿ ಮಾಡುವಾಗ ಮಾತ್ರ ಸಹ್ಯವೆನಿಸುತ್ತಿರಲಿಲ್ಲ.

ಹಬ್ಬ ಹರಿದಿನಗಳಿಗೋ ಅಥವ ಮನೆಯಲ್ಲಿನ ತುತ್ತಿನ ಚೀಲಗಳ ಸೇರ್ಪಡೆಯ ಪ್ರಯುಕ್ತ ನೆರವೇರಿಸುವ ಪುಣ್ಯಾಹಕ್ಕೋ ಇಲ್ಲಾ ವಂಶಸ್ಥರ ಮನೆಯಲ್ಲಿನ ಹುಟ್ಟು, ಸಾವಿನ ಸಲುವಾಗಿನ ಸೂತಕಕ್ಕೆ ಶುದ್ಧಿಕಾರ್ಯವೆಸಗಲು ಮನೆಗೆ ಸುಣ್ಣ ಬಳಿಯಲು ಭಾನುವಾರದಂದು ಬೆಳಿಗ್ಗೆಯೇ ಮೈಸೂರಿನ ದಕ್ಷಿಣ ದಿಕ್ಕಿನಲ್ಲಿದ್ದ ಸುಣ್ಣದ ಗೂಡಿನಿಂದ ಸುಣ್ಣದ ಕಲ್ಲುಗಳನ್ನು ತಮ್ಮನೊಡಗೂಡಿ ತಂದು, ಅಮ್ಮನವರೊಂದಿಗೆ ಸೇರಿ ತಂದ ಸುಣ್ಣದ ಕಲ್ಲನ್ನು ಕಬ್ಬಿಣದ ಬಕೆಟ್‌ನಲ್ಲಿ ಹಾಕಿ ನೀರು ಸುರಿದು ಕೊತ ಕೊತ ಕುದಿಯುವ ಸುಣ್ಣಕ್ಕೆ ಕೊಂಚ ನೀಲಿ ಪುಡಿಯನ್ನು ಗೋಡೆಯಲ್ಲಾ ಹೊಳೆಯಲಿ ಎಂದು ಬೆರೆಸಿ ಮುಚ್ಚಳ ಮುಚ್ಚಿಟ್ಟು ಸ್ವಲ್ಪ ಸಮಯದ ನಂತರ ಬೆಂದ ಸುಣ್ಣಕ್ಕೆ ಹದಕ್ಕೆ ತಕ್ಕಂತೆ ನೀರನ್ನು ಸೇರಿಸಿ ಜಾಲಾಡಿ ಬೇಯದೆ ಉಳಿದಿರುತ್ತಿದ್ದ ಸಣ್ಣ ಸಣ್ಣ ಕಲ್ಲುಗಳನ್ನು ಬೇರ್ಪಡಿಸಿ ಹೊರತೆಗೆದ ಮೇಲೆ ಒಣಗಿದ ತೆಂಗಿನ ಮಟ್ಟೆಯನ್ನು ನೀರಿನಲ್ಲಿ ಅದ್ದಿ ಬಡಿದು ಕುಂಚದ ಆಕಾರಕ್ಕೆ ಬದಲಾಯಿಸಿ ಅದರ ಸಹಾಯದಿಂದ ಇಡೀ ಮನೆಗೆ ಸುಣ್ಣ ಬಳಿದು ನಂತರ ಹಸುವಿನ ಸಗಣಿಯನ್ನು ನೀರಿನಲ್ಲಿ ಕಲಸಿ ನೆಲವನ್ನು ಸಾರಿಸುವ ನನ್ನ ಕಾರ್ಯವನ್ನು ಗಮನಿಸುತ್ತಿದ್ದ ಅಮ್ಮನವರು ಆಗಾಗ್ಗೆ "ಮೋಹನಾ, ನೀನು ಗಂಡು ಮಗನಾಗಿ ಹುಟ್ಟುವ ಬದಲು ಹೆಣ್ಣಾಗಿದ್ದಿದ್ದರೆ, ನನಗೆ ಅದೆಷ್ಟೋ ಆಸರೆಯಾಗುತ್ತಿತ್ತಲ್ಲೋ" ಎನ್ನುತ್ತಿದ್ದರು.

ಹಿರಿಯ ಪ್ರಾಥಮಿಕ ಶಾಲೆಯ ವ್ಯಾಸಂಗ ಮುಗಿಯುವ ತನಕ ತಪ್ಪದೇ ಪ್ರತೀ ವರ್ಷ ಬೇಸಿಗೆಯ ರಜಾ ದಿನಗಳಲ್ಲಿ ಅಮ್ಮನವರೊಂದಿಗೆ ನಾವು ಮಕ್ಕಳೆಲ್ಲಾ

ದೊಡ್ಡಬಳ್ಳಾಪುರಕ್ಕೆ ಹೋಗುತ್ತಿದ್ದೆವು. ನಮ್ಮನ್ನು ಕಂಡರೆ ಊರಿನವರಿಗೆ ಏನೋ ಹೆಮ್ಮೆ. ಈ ಹಾಳು ಮಗ್ಗ, ಬಟ್ಟೆ ವ್ಯಾಪಾರವನ್ನು ಬಿಟ್ಟು ಮಹಾರಾಜರಿರುವ ಮೈಸೂರಿನಲ್ಲಿ ನೆಲೆಸಿದ್ದಾರೆ ಎಂದು. ಅವರಿಗೆಷ್ಟು ಗೊತ್ತಿತ್ತೋ ನಾವು ಬಾಳುತ್ತಿದ್ದ ಅರಸುತನದ ಬಾಳು!

ನಮ್ಮ ಬಳಗದವರು ನಮಗೆಲ್ಲಾ ತೋರುತ್ತಿದ್ದ ಆದರ, ಆತಿಥ್ಯ ಅದರಲ್ಲೂ ಇಬ್ಬರು ದೊಡ್ಡಮ್ಮಂದಿರ ಪ್ರೀತಿ, ವಾತ್ಸಲ್ಯ–ಮಾತ್ರ ನಮ್ಮ ಜೀವನದಲ್ಲಿ ಎಂದೆಂದಿಗೂ ಮರೆಯಲಾಗದ ಮತ್ತು ಮರೆಯಬಾರದ ಅನುಭವ. ದೊಡ್ಡಮ್ಮಂದಿರನ್ನು ನಾವೂ ಸಹ ನಮ್ಮ ಅಮ್ಮನವರಂತೆ ದೊಡ್ಡಕ್ಕಯ್ಯ ಮತ್ತು ಚಿಕ್ಕಕ್ಕಯ್ಯ ಎಂದೇ ಸಂಭೋಧಿಸುತ್ತಿದ್ದೆವು!

ದೊಡ್ಡಕ್ಕಯ್ಯನವರ ಪತಿಯವರು ತಾನಾಯಿತು ತನ್ನ ಪಾಡಾಯಿತು ಎಂಬಂತೆ ಜೀವಿಸಿದ್ದವರು. ವೇಳೆಗೆ ಸರಿಯಾಗಿ ಬಂದು ಊಟ, ತಿಂಡಿ ಮಾಡುವುದು, ಅಡುಗೆ ರುಚಿಯಾಗಿರಬೇಕು ಇಲ್ಲದಿದ್ದರೆ ಭಾರೀ ಅವಾಂತರ ಮಾಡುತ್ತಿದ್ದುದ್ದಲ್ಲದೆ ತನ್ನ ಖರ್ಚಿಗೆ ಕಾಸನ್ನೂ ಸಹ ಹೆಂಡತಿಯಿಂದಲೇ ಕೀಳುತ್ತಿದ್ದರು! ದೊಡ್ಡಕ್ಕಯ್ಯನವರೋ ಇಡೀ ಕುಟುಂಬದ ಜವಾಬ್ದಾರಿಯನ್ನು ತಮ್ಮ ಹೆಗಲಿಗೇರಿಸಿಕೊಂಡು ತಮ್ಮ ಮಕ್ಕಳು ದುಡಿದು ತರುತ್ತಿದ್ದ ಅಲ್ಪ ಸ್ವಲ್ಪ ಕೂಲಿ ಹಣದೊಂದಿಗೆ ತಾನೂ ಒಂದು ಹೊಲಿಗೆ ಯಂತ್ರದೊಂದಿಗೆ ಹಗಲಿರುಳು ತನ್ನ ಜೀವ ತೇದು ಸಂಸಾರದ ಭಾರವನ್ನು ಸರಿದೂಗಿಸುತ್ತಿದ್ದರು.

ಅಮ್ಮನವರು ನಮಗೆಲ್ಲಾ ಹಳೆಯ ಉಡುಪುಗಳನ್ನೇ ಉಪಯೋಗಿಸಿ ಚಡ್ಡಿ ಬನಿಯನ್ ಮತ್ತು ಅಂಗಿಗಳನ್ನು ಕೈಯಲ್ಲೇ ಹೊಲೆಯುತ್ತಿದ್ದರು. ಶಾಲಾ ಸಮವಸ್ತ್ರವನ್ನು ಮಾತ್ರ ಖರೀದಿಸುತ್ತಿದ್ದದ್ದು. ಇದನ್ನು ಗಮನಿಸಿದ್ದ ದೊಡ್ಡಕ್ಕಯ್ಯನವರು ಪ್ರತೀ ಸಲ ನಾವು ಬೇಸಿಗೆ ರಜಾ ಮುಗಿಸಿ ಮೈಸೂರಿಗೆ ಹೊರಡುವ ಹಿಂದಿನ ರಾತ್ರಿಯೆಲ್ಲಾ ನಿದ್ದೆಗೆಟ್ಟು ನಮಗೆಲ್ಲಾ ತಲಾ ಎರಡೆರಡು ಜೊತೆ ಹೊಸ ಅಂಗಿ ಹಾಗೂ ಚಡ್ಡಿಗಳನ್ನು ಹೊಲೆದು ಕೊಡುತ್ತಿದ್ದರು. ಆ ಮಾತೆಯ ನಿಸ್ವಾರ್ಥ, ಬೆಲೆಕಟ್ಟಲಾಗದ ಕೊಡುಗೆಯ ಋಣವನ್ನು ನಮ್ಮ ಜನ್ಮ ಕಳೆದರೂ ತೀರಿಸಲಾಗದ್ದು!

ಆಕೆಯು ತನ್ನ ಕಡೆಯ ಉಸಿರಿರುವವರೆಗೂ ತನ್ನ ಕಾರ್ಯತತ್ಪರತೆಯಿಂದ ವಿಮುಖರಾಗಿರಲಿಲ್ಲ. ಹೊರೋಕ್ಕೆ ಮತ್ತು ಅಳೋಕ್ಕೇ ಎಂಬಂತೆ ಸರಿಯಾಗಿ, ನಾಲ್ಕು ಗಂಡು ಮತ್ತು ಒಂದು ಹೆಣ್ಣು ಆಯಮ್ಮನಿಗೆ! ಯಾರೂ ಏಳಿಗೆಯಾಗಲಿಲ್ಲ. ಮಕ್ಕಳೆಲ್ಲಾ

ಆ ತಾಯಿಯ ಆಶ್ರಯದಲ್ಲೇ ಇದ್ದು ಕಬ್ಬಿನ ಜಲ್ಲೆಯನ್ನು ಹಿಂಡಿ ಕಟ್ಟ ಕಡೆಯ ರಸವನ್ನು ತೆಗೆಯುವ ಯಂತ್ರದಂತೆ ಆಕೆಯನ್ನು ಹೀರಿ ಹಿಪ್ಪೆ ಮಾಡಿಬಿಟ್ಟರು!

ಪರಿಸ್ಥಿತಿ ಹೀಗಿದ್ದರೂ, ನಾಲ್ವರಂತೆ ತನ್ನ ಸಂಸಾರವೂ ಇರಬೇಕೆಂದು ಯಾರ ಮುಂದೆಯೂ ಕೈಯೊಡ್ಡದೇ ಇದ್ದುದ್ದರಲ್ಲೇ ಸಂಸಾರವನ್ನು ನಿಭಾಯಿಸುವಲ್ಲಿ ಜಾಣ್ಮೆ ತೋರುತ್ತಾ ತನ್ನ ಸ್ವಾಭಿಮಾನಕ್ಕೆ ಧಕ್ಕೆ ಬರದಂತೆ ಎಲ್ಲಾ ಮಕ್ಕಳನ್ನು ತನ್ನ ತೆಕ್ಕೆಯಲ್ಲಿರಿಸಿಕೊಂಡು ಕಾಪಾಡಿ, ಅವರುಗಳೆಲ್ಲಾ ಒಂದೆಡೆ ನೆಲೆಗೊಳ್ಳಲು ಒಂದು ಸ್ವಂತ ಸೂರನ್ನು ಮಾಡಿಟ್ಟು ಮಕ್ಕಳಿಗೆ ಬಿಟ್ಟು ಹೋದ ಮಹಾ ಮಹಿಳೆ!

ಅಷ್ಟೆಲ್ಲಾ ಕಷ್ಟ ಕಾರ್ಪಣ್ಯಗಳ ನಡುವೆಯೂ ತನ್ನ ದೇಹ ಅನಾರೋಗ್ಯದಿಂದ ಬಳಲುವ ದಿನಗಳನ್ನು ಹೊರತು ಪಡಿಸಿ, ಪ್ರತೀ ಪ್ರಾತಃಕಾಲ ಆಕೆಯ ಮನೆಯ ಸಮೀಪದಲ್ಲಿದ್ದ ದೇವಸ್ಥಾನದ ಆವರಣವನ್ನು ಶುಚಿಗೊಳಿಸುವ ಕೈಂಕರ್ಯ ಮಾಡುತ್ತಿದ್ದುದಲ್ಲದೇ ಪ್ರತೀ ವರ್ಷ ತನ್ನ ಕೈಲಾದಷ್ಟು ಜನರಿಗೆ ಅನ್ನದಾನವನ್ನು ಮಾಡುತ್ತಿದ್ದ ಅನ್ನಪೂರ್ಣೆ. ತನ್ನ ಸಂಸಾರದ ಎಲ್ಲಾ ದುಗುಡ ದುಮ್ಮಾನಗಳನ್ನು ತಾನೇ ನಿಭಾಯಿಸಿ ಕಟ್ಟ ಕಡೆಗೆ ತನ್ನ ಅಂತ್ಯಸಂಸ್ಕಾರಕ್ಕೂ ಬ್ಯಾಂಕ್‌ನಲ್ಲಿ ದುಡ್ಡು ಉಳಿಸಿಟ್ಟು ಈ ಜಗದಿಂದಲೇ ಗರ್ವದಿಂದ ಪರಲೋಕಕ್ಕೆ ತೆರಳಿದ ಧೀಮಂತೆ.

ಇನ್ನು ಚಿಕ್ಕಕ್ಕಯ್ಯನವರು ಪಡೆದುಕೊಂಡು ಬಂದವರಂತೆ ಬಾಳಿದಾಕೆ! ಶ್ರೀಮಂತ ಕುಟುಂಬಕ್ಕೆ ಹಿರಿಯ ಸೊಸೆಯಾಗಿ ಸೇರಿ, ನಾಲ್ಕು ಹೆಣ್ಣು ಮತ್ತು ಒಂದು ಗಂಡು ಮಗುವಿಗೆ ತಾಯಿ ಆದಾಕೆ. ನಿರಂತರವಾಗಿ ಬರೀ ಹೆಣ್ಣು ಮಕ್ಕಳಾಗುತ್ತಿದ್ದಾಗ ಎಲ್ಲಾ ದೇವರಿಗೆ ಹರಕೆ ಹೊತ್ತು ಪ್ರತಿಫಲವಾಗಿ ಹಡೆದ ಗಂಡು ಮಕ್ಕಳು ಮೂರಾದರು ಕಡೆಗೆ ಬದುಕಿ ಉಳಿದದ್ದು ಒಂದೇ.

ಒಬ್ಬಳನ್ನು ಹೊರತು ಪಡಿಸಿ ಮಿಕ್ಕೆಲ್ಲಾ ಹೆಣ್ಣು ಮಕ್ಕಳ ವೈವಾಹಿಕ ಜೀವನ ತಕ್ಕಮಟ್ಟಿಗೆ ನೆಮ್ಮದಿಯಿಂದ ನಡೆಸುವಂತಾಗಿದೆ. ಆ ಒಬ್ಬಳಿಗೆ ಒಂದು ಗಂಡು ಮಗುವಾದ ಮೇಲೇ ಅರಿವಾಗಿದ್ದು ತನ್ನ ಪತಿರಾಯರು ದಾರಿ ತಪ್ಪಿ ಬಹು ದೂರ ಹೋಗಿರುವರೆಂದು!

ಆಘಾತವಾಗಿ ಹಿರಿಯರನ್ನೆಲ್ಲಾ ಸೇರಿಸಿ ಎಷ್ಟೇ ಬುದ್ಧಿ ಹೇಳಿಸಿದರೂ ಆತನ ನಡವಳಿಕೆಯನ್ನು ಯಾರಿಂದಲೂ ತಿದ್ದಲಾಗಲಿಲ್ಲ, ಕಡೆಗೆ ರೋಸಿ ಹೋದ ಆಕೆ, ಆತನನ್ನು ಮನೆಯಿಂದಲೇ ಹೊರಗಟ್ಟಿ ತಾನೇ ಸಂಸಾರದ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತು ಯಾವ ಗಂಡಸಿಗೂ ಕಡಿಮೆ ಇಲ್ಲದಂತೆ ಕೂಲಿ ನಾಲಿ ಮಾಡಿ ಮಗನನ್ನು ಚೆನ್ನಾಗಿ ಬೆಳೆಸಿ, ತಕ್ಕ ಮಟ್ಟಿಗೆ ಓದಿಸಿ ಆತನಿಗೆ ಉದ್ಯೋಗ

ದೊರೆತ ಮೇಲೆ ಮದುವೆಯ ಶಾಸ್ತ್ರವನ್ನು ಮುಗಿಸಿ ವರ್ಷ ಕಳೆಯುವುದರಲ್ಲಿ ತನ್ನ ಮಡಿಲು ತುಂಬಿದ ಮುದ್ದಾದ ಮೊಮ್ಮಗಳನ್ನು ನೋಡಿ ಸುಖಿಸಿದ್ದಳು.

ಅತ್ತ ದೊಡ್ಡಪ್ಪನವರು ತಮ್ಮ ಇಹಲೋಕದ ಯಾತ್ರೆ ಮುಗಿಸಿದ ಮೇಲೆ, ಕುಮಾರ ಕಂಠೀರವನ ಭರಾಟೆ ತಾರಕಕ್ಕೇರಿ ಚಿಕ್ಕಕ್ಕಯ್ಯನವರಿಗೆ ಅದನ್ನು ನಿಭಾಯಿಸುವ ಮಾರ್ಗ ಕಾಣದೆ ಜರ್ಝರಿತರಾಗಿ ಕುಗ್ಗಿದ ಆ ಇಳಿ ವಯಸ್ಸಿನ ಜೀವ ಈಗ ಆಶ್ರಯ ಪಡೆದಿರುವುದು ಆ ಮಗಳ ಮನೆಯಲ್ಲಿ!

ಆ ಮಗಳು ಪ್ರಸ್ತುತ ದಾದಿಯ ಕೈಂಕರ್ಯದಲ್ಲಿ ತೊಡಗಿಸಿಕೊಂಡು ಜಗತ್ತಿನಲ್ಲಿ ಶ್ರೇಷ್ಠವಾದ ಸೇವೆಯಾದ ವಿಕಲ ಚೇತನರ ಶುಶ್ರೂಷೆಗೆ ತನ್ನನ್ನು ಮುಡಿಪಾಗಿರಿಸಿ ಕೃತಾರ್ಥ ಮನೋಭಾವದಿಂದ ಬೀಗುತ್ತಿದ್ದಾಳೆ.

ಅಂದಹಾಗೇ, ಆ ಒಬ್ಬಳು ವಯಸ್ಸಿನಲ್ಲಿ ನನಗಿಂತ ಎರಡು ವರ್ಷ ಕಿರಿಯಳು. ಆ ವಯಸ್ಸಿಗೇ ಆಕೆ ತನ್ನ ಜೀವನದಲ್ಲಿ ಎದುರಾದ ಎಲ್ಲಾ ರೀತಿಯ ಮಜಲುಗಳನ್ನು ನಿರ್ಭಿಡೆಯಿಂದ ಏರಿಳಿದು ನಿಭಾಯಿಸಿದ ರೀತಿಯಂತೂ ಶ್ಲಾಘನೀಯ ಹಾಗೂ ಅನುಕರಣೀಯ!

ಬೇಸಿಗೆ ರಜೆಯ ವೇಳೆಯಲ್ಲಿ ಊರಿನಲ್ಲಿರುವಾಗ ನಮ್ಮ ವಾಸ್ತವ್ಯ ಅಮ್ಮನವರ ತವರು ಮನೆಯಲ್ಲಿ.

ಅಲ್ಲಿ ನನ್ನ ಓರಿಗೆಯವರಾದ ದೊಡ್ಡ ಮಾವನ ಮಕ್ಕಳು ಹಾಗೂ ದೊಡ್ಡಕ್ಕಯ್ಯನವರ ಮಕ್ಕಳೊಂದಿಗೇ ಹೆಚ್ಚು ಒಡನಾಟ. ಅಪರೂಪಕ್ಕೊಮ್ಮೆ ತಂದೆಯ ಬಳಗದವರ ಮನೆಗಳಿಗೆ ನನ್ನ ಭೇಟಿ. ಈ ನನ್ನ ವರ್ತನೆಯಿಂದ ಅಸಂತುಷ್ಟರಾದ ಅವರು ತಮ್ಮ ಆಕ್ಷೇಪಣೆಯನ್ನು ನಮ್ಮನ್ನು ಮೈಸೂರಿಗೆ ವಾಪಸ್ ಕರೆದೊಯ್ಯಲು ಊರಿಗೆ ಬರುತ್ತಿದ್ದ ತಂದೆಯವರ ಮುಂದಿಡುತ್ತಿದ್ದುದ್ದಲ್ಲದೇ ಮುಂದೆ ನನ್ನ ಆ ನಡವಳಿಕೆಯನ್ನು ತಿದ್ದಿಕೊಳ್ಳುವಂತೆ ಸೂಚಿಸುತ್ತಿದ್ದರು.

ರಜೆಯ ಅವಧಿಯಲ್ಲಿ ಜರುಗುತ್ತಿದ್ದ ಬಂಧು ಬಳಗದವರ ಮನೆಯಲ್ಲಿನ ಮದುವೆಯ ಕಾರ್ಯಗಳು ನನಗೆ ಬಹು ಸಂತೋಷ ತರುವ ಸಾಧನವಾಗಿದ್ದವು. ಕಾರಣ, ಬಗೆ ಬಗೆ ಭಕ್ಷ್ಯಗಳ ಲಭ್ಯತೆಯೊಂದಿಗೆ ಯಾವುದೋ ಶಾಸ್ತ್ರದ ನಿಮಿತ್ತ ಅತೀ ದೂರದೂರಿನಿಂದ ಮದುವೆಯ ಸಮಾರಂಭಕ್ಕೆ ಆಗಮಿಸಿದವರಿಗೆಂದೇ ಸಲ್ಲುವ ತಾಂಬೂಲ ದಕ್ಷಿಣೆಯನ್ನು, ಮೈಸೂರಿನಿಂದ ಬಂದವನೆಂದು ಗುರುತಿಸಿ ನನ್ನ ಪಾಲಾಗಿಸುತ್ತಿದ್ದುದ್ದರಿಂದ!

ಹಲವು ಬಾರಿ, ಒಂದೇ ದಿನದಲ್ಲಿ ಎರಡು ಅಥವ ಮೂರು ಮದುವೆ ಕಾರ್ಯಕ್ರಮಗಳು! ಆಗೆಲ್ಲಾ ನಮಗೆ ಯಾರ ಮನೆಯ ಮದುವೆ ಎನ್ನುವುದು ಗಣನೀಯವಾಗದೆ, ನಮ್ಮ ಗಮನವೆಲ್ಲಾ ಯಾವ ಸಿಹಿ ತಿಂಡಿ ಯಾರ ಮನೆ ಮದುವೆಯಲ್ಲಿ ಎಂದು ತಿಳಿದು ನಮಗೆ ಬೇಕೆನಿಸಿದ ಸಿಹಿಯನ್ನು ಅರಸಿ ಆ ಮದುವೆಗೆ ಹಾಜರಾಗುತ್ತಿದ್ದ ಪರಿ!

ಇಡೀ ಊರಿನಲ್ಲಿ ಕುಡಿಯಲು ಸಿಹಿ ನೀರಿನ ಲಭ್ಯ ಬಹು ವಿರಳ. ಕೆಲವೊಮ್ಮೆ ಓರಿಗೆಯವರೊಂದಿಗೆ ಸಿಹಿ ನೀರಿನ ಸವಿಯನ್ನು ಸವಿಯಲು ಊರಿನ ಹೊರ ವಲಯದಲ್ಲಿನ ಸ್ವಲ್ಪ ಎತ್ತರದ ಸ್ಥಳವನ್ನು ದಿಣ್ಣೆ ಎಂದೇ ಗುರುತಿಸಿಕೊಂಡಿದ್ದ ಪ್ರದೇಶದಲ್ಲಿ ವಾಸಕ್ಕಿದ್ದ ನನ್ನ ತಾತನವರ, ತಂದೆಯ ತಂದೆಯವರ ಮನೆಗೆ ಹೋಗಿ ಅವರ ಮನೆಯ ಹತ್ತಿರದಲ್ಲೇ ಇದ್ದ ಬೃಹತ್ ಆಲದ ಮರದ ಟೊಂಗೆಗೆ ಹಗ್ಗವನ್ನು ಕಟ್ಟಿ ಮನಸ್ಸೋ ಇಚ್ಛೆ ಜೋಕಾಲಿಯಾಡಿ ನಲಿದು ಸಾಕೆನಿಸಿದ ಮೇಲೆ ಅಜ್ಜಿಯವರು ಕೊಡುತ್ತಿದ್ದ ತಿಂಡಿ ಸೇವಿಸಿ ಕುಡಿದಷ್ಟೂ ಮತ್ತೂ ಕುಡಿಯಬೇಕೆನಿಸುವ ಮಣ್ಣಿನ ಹರವಿಯಲ್ಲಿನ ಸಿಹಿಯಾದ ತಣ್ಣೀರಿನಿಂದ ದಾಹ ಇಂಗಿಸಿಕೊಂಡರೆ ಸ್ವರ್ಗಕ್ಕೆ ಕಿಚ್ಚು ಹಚ್ಚುವುದೊಂದೇ ಬಾಕಿ!

ರಜೆಯ ಅವಧಿಯಲ್ಲಿ ಓರಿಗೆಯವರೊಂದಿಗೆ ಮರಕೋತಿ, ಲಗೋರಿ, ಕೆರೆ–ದಡ, ಕಳ್ಳಾ–ಪೋಲೀಸ್, ಗಿಲ್ಲಿ–ದಾಂಡು, ಕುಂಟೆ ಬಿಲ್ಲೆ, ಅಂತ್ಯಾಕ್ಷರಿ ಮುಂತಾದ ಆಟಗಳನ್ನು ಸಡಗರದಿಂದ ಆಡಿ ಅನುಭವಿಸಿ ಮೈ ಮರೆತಿರುವಾಗ ಮೈಸೂರಿಗೆ ಹಿಂದಿರುಗಲೇಬೇಕಾದ, ಸುತಾರಾಂ ಇಷ್ಟವಿಲ್ಲದ ಗಡುವು ಸಮೀಪಿಸಿ ಮನಸ್ಸಿನಲ್ಲಿ ಕ್ಲೇಷ ಅಮರಿಕೊಂಡು ವೇದನೆಯಾಗುತ್ತಿತ್ತು.

ಹಿರಿಯ ಪ್ರಾಥಮಿಕ ಶಾಲೆಯ ವ್ಯಾಸಂಗ ಮುಗಿದು ಹೈಸ್ಕೂಲಿಗೆ ದಾಖಲಾಗಬೇಕಿತ್ತು. ತಂದೆಯವರೆಂದರು ನಿರ್ಣಾಯಕವಾಗಿ, "ನನಗೆ ಮುಂದೆ ಓದಿಸಲು ಶಕ್ತಿ ಇಲ್ಲ ಎಲ್ಲಾದರು ಕೆಲಸಕ್ಕೆ ಹೋಗು, ಸಾಲದ ಸುಳಿಯಲ್ಲಿ ಸಿಲುಕಿ ಒದ್ದಾಡುತ್ತಿದ್ದೇನೆ. ಮುಂದೆ ಶಾಲೆಯ ಖರ್ಚನ್ನು ಭರಿಸಲು ನನ್ನಿಂದ ಸಾಧ್ಯವಿಲ್ಲ."

ಅಮ್ಮನವರಿಗೆ ಅಳುಕು, ಮಕ್ಕಳನ್ನು ಶಾಲೆಗೆ ಕಳುಹಿಸದಿದ್ದರೆ ನೆಂಟರು ಇಷ್ಟರ ಮುಂದೆ ತಲೆ ಎತ್ತಿ ತಿರುಗುವುದು ಹೇಗೆ ಎಂದು, ಅಂಜಿಕೆ! ತಂದೆಯವರನ್ನು ಒಪ್ಪಿಸಲು

ಎಲ್ಲಿಂದ ತರಲಿ ಹಣವನ್ನು? ಹೋಗು, ನಿಮ್ಮಪ್ಪನ ಮನೆಯಿಂದ ದುಡ್ಡನ್ನು ತಂದು ಓದಿಸು ಎನ್ನುವರು. ಇನ್ನೂ ಹೆಚ್ಚಿಗೆ ಮಾತನಾಡಿದರೆ ಬೀಳುತ್ತೆ ಸಹ ಒಂದಷ್ಟು ಖರ್ಚಿಗೆ!

ಸ್ನೇಹಿತರೊಡಗೂಡಿ ಶಾರದಾ ವಿಲಾಸ, ಮರಿಮಲ್ಲಪ್ಪ ಮತ್ತು ಹಾರ್ಡ್ವಿಕ್ ಹೈಸ್ಕೂಲ್‌ಗಳಿಗೆ ಅರ್ಜಿ ಸಲ್ಲಿಸಿದ್ದು ಮುಂದಿನ ನಡೆ ಬಗ್ಗೆ ಏನೂ ಸ್ಪಷ್ಟತೆ ಇರಲಿಲ್ಲ.

ಒಂದು ಭಾನುವಾರದಂದು ತಂದೆಯವರು ತಿಂಡಿ ತಿಂದು ಮಂದಸ್ಮಿತರಾಗಿ ಕುಳಿತ್ತಿದ್ದುದನ್ನು ಕಂಡು ಅಮ್ಮನವರು ನೆನಪಿಸಿದರು

"ಏನ್ರೀ ಎಲ್ಲಾದರು ಅಡ್ಮಿಷನ್ ಫೀಸಿಗೆ ವ್ಯೆವಸ್ಥೆ ಮಾಡ್ತೀರಾ?" ಎಂದು.

ತಂದೆಯವರು ಉತ್ತರಿಸಿದರು, "ನಾನು ಎಲ್ಲಾ ಕಡೆ ಪ್ರಯತ್ನಿಸಿದೆ, ಎಲ್ಲೂ ಹುಟ್ಟುತ್ತಿಲ್ಲಾ" ಮುಂದುವರೆದು "ಸರಿ, ಲಿಂಗಣ್ಣನವರನ್ನಾದರು ವಿಚಾರಿಸೋಣ ನಡಿ" ಎಂದು ನನ್ನನ್ನು ಜೊತೆಯಲ್ಲಿ ಕರೆದುಕೊಂಡು ಹೊರಟರು.

ಶ್ರೀಯುತ ಲಿಂಗಣ್ಣನವರು ನಾವಿದ್ದ ವಠಾರದಲ್ಲಿ ಮುಂಚೆ ಇದ್ದವರು, ಹೈನುಗಾರಿಕೆ, ಲೇವಾದೇವಿ ಮಾಡಿಕೊಂಡು ಹಣ ಗಳಿಸಿ, ಸ್ವಂತ ಮನೆ, ಆಸ್ತಿ ಮಾಡಿಕೊಂಡು ಸೊಂಪಾಗಿದ್ದರು. ದುರದೃಷ್ಟವೆಂಬಂತೆ ಆ ದಂಪತಿಗಳಿಗೆ ಸಂತಾನಭಾಗ್ಯವಿರಲಿಲ್ಲ. ಪ್ರಕೃತಿಯ ನಿಯಮವೇ ಅದಲ್ಲವೆ? ಹಲ್ಲಿದ್ದವನಿಗೆ ಕಡಲೆ ಇಲ್ಲ, ಕಡಲೆ ಇದ್ದವನಿಗೆ ಹಲ್ಲಿಲ್ಲ .

ಲಿಂಗಣ್ಣನವರ ಮನೆಯನ್ನು ತಲುಪಿದಾಗ ನನಗೆ ಕಂಡದ್ದು, ತಮ್ಮ ಧರ್ಮಪತ್ನಿ ಶ್ರೀಮತಿ ರಾಜಮ್ಮನವರೊಡನೆ ಲಿಂಗಣ್ಣನವರು ಲೋಕಾಭಿರಾಮವಾಗಿ ಮಾತನಾಡುತ್ತಾ ಸಾಕ್ಷಾತ್ ಪಾರ್ವತೀ ಪರಮೇಶ್ವರರಂತೆ ಅವರ ಮನೆಯ ಪಡಸಾಲೆಯಲ್ಲಿ ಕುಳಿತಿದ್ದ ದೃಶ್ಯ.

ಪಡಸಾಲೆಯ ಗೋಡೆಯೆಲ್ಲಾ ಸಾಕಷ್ಟು ಹೂವಿನಿಂದ ಅಲಂಕೃತಗೊಂಡ ದೇವರ ಚಿತ್ರಪಟಗಳಿಂದ ಆವರಿಸಲ್ಪಟ್ಟಿತ್ತು ಹಾಗೂ ಗೋಡೆಯ ಮಧ್ಯದಲ್ಲಿದ್ದ ಸಣ್ಣ ಗೂಡಿನಲ್ಲಿ ಹಚ್ಚಿಟ್ಟಿದ್ದ ದೀಪಗಳ ಜ್ಯೋತಿ ಅಲುಗಾಡದೆ ಮಂದ ಬೆಳಕನ್ನು ಬೀರುತ್ತಿತ್ತು. ಉರಿಯುತ್ತಿದ್ದ ಗಂಧದ ಕಡ್ಡಿಗಳ ಸುವಾಸಿತ ಧೂಮ ಇಡೀ ಕೋಣೆಯಲ್ಲಿ ದಟ್ಟವಾಗಿ ಹರಡಿ ದೇವಸ್ಥಾನವನ್ನು ನೆನಪಿಸುತ್ತಿತ್ತು.

ದಂಪತಿಗಳ ಲಲಾಟದಲ್ಲಿ ವಿಭೂತಿ ಮತ್ತು ಕುಂಕುಮ ವಿರಾಜಿಸುತ್ತಿತ್ತು. ನಮ್ಮನ್ನು ಕಂಡವರೇ ಮನೆಯೊಳಕ್ಕೆ ಆದರದಿಂದ ಬರಮಾಡಿಕೊಂಡು ಕಾಫಿ ಕೊಟ್ಟು ಸತ್ಕರಿಸಿದ ನಂತರ ಬಂದ ವಿಷಯ? ಎಂದು ಪೀಠಿಕೆ ಹಾಕಿದರು ಲಿಂಗಣ್ಣನವರು.

ತಂದೆಯವರು ವಿವರಿಸಿದ ಪರಿಸ್ಥಿತಿಯನ್ನು ಆಲಿಸಿದ ಲಿಂಗಣ್ಣನವರು ತಮ್ಮ ಹೆಂಡತಿಯ ಕಡೆಗೆ ತಿರುಗಿದರು. ಬಾಯಿ ಬಿಟ್ಟು ಹೇಳದೆ ಇದ್ದರೂ ಸನ್ನೆಯಿಂದಲೇ

ಗ್ರಹಿಸಿದ ರಾಜಮ್ಮನವರು ತಂದು ಕೊಟ್ಟ ನೂರು ರೂಪಾಯಿಯನ್ನು ಲಿಂಗಣ್ಣನವರು ತಂದೆಯವರ ಕೈಲಿಟ್ಟು ನನ್ನ ಕಡೆಗೆ ತಿರುಗಿ "ವೋಗು ಮಗಾ ವೋದು, ಚೆಂದಾಕಿ ವೋದು, ವೋದಿ ದೊಡ್ಮನ್ಸನಾಗಿ ನೀನು ಸಂಪಾದ್ನೆ ಮಾಡೋ ಕಾಲಕ್ಕೆ ಕೊಡೊವಂತೆ ದುಡ್ಡನ್ನ," ನಂತರ ತಂದೆಯವರ ಕಡೆಗೆ ತಿರುಗಿ "ನಮಗಂತು ಮಕ್ಕ್ಳಿಲ್ಲ ಮರಿ ಇಲ್ಲ, ಸಿವಾ ಒಳ್ಳೇದು ಮಾಡ್ಲಿ" ಎಂದು ಹರಸಿದರು.

ಮನಸ್ಸಿಗೆ ಬಹಳ ಖೇದವೆನಿಸುವ ವಿಚಾರವೆಂದರೆ, ನಾನು ಸಂಪಾದನೆ ಮಾಡುವ ಕಾಲಕ್ಕೆ ಅವರು ಕಾಲವಾಗಿ ಬಹು ಕಾಲವಾಗಿತ್ತು!

ಎಸ್.ಎಸ್.ಎಲ್.ಸಿ ಯ ತನಕದ ವ್ಯಾಸಂಗವು ಹಿರಿಯ ವಿದ್ಯಾರ್ಥಿಗಳಿಂದ ಅರ್ಧ ಬೆಲೆಗೆ ಪಡೆದ ಪಠ್ಯ ಪುಸ್ತಕಗಳೊಂದಿಗೆ ಹಾರ್ಡ್ವಿಕ್ ಹೈಸ್ಕೂಲಿನಲ್ಲಿ ಸಾಂಗವಾಗಿ ನೆರವೇರಿದ್ದು ನಂತರ ಏನೆಂಬುದು ಪ್ರಶ್ನಾರ್ಥಕವಾಗಿಯೇ ಉಳಿದಿತ್ತು.

ಮನೆಯಲ್ಲಿ ಒಂಬತ್ತನೆಯ ತುತ್ತಿನ ಚೀಲ ಕಿರಣ್ ಎಂಬ ಹೆಸರಿನಲ್ಲಿ ಸೇರಿ ಸಂಸಾರ ನೊಗದ ಭಾರ ಹೆಚ್ಚಾಗಿತ್ತು. ಸಾಲ ಕೊಟ್ಟವರ ಹೊಡೆತ ಹಿಡಿತದಿಂದ ತಪ್ಪಿಸಿಕೊಳ್ಳಲು ತಂದೆಯವರು ಅಲ್ಲಿಂದ ತಂದು ಇಲ್ಲಿಗೆ, ಇಲ್ಲಿಂದ ತಂದು ಅಲ್ಲಿಗೆ ಕೊಡಲು ಶತಪ್ರಯತ್ನ ನಡೆಸುತ್ತಿದ್ದರು.

ಪರೀಕ್ಷೆಯ ಫಲಿತಾಂಶ ಬರುತ್ತಿದ್ದ ಹಾಗೇ ತಂದೆಯವರ ಸಹೋದ್ಯೋಗಿ ಚಿಕ್ಕ ಅರಸು ಎಂಬುವರ ಶಿಫಾರಸಿನ ಮೇರೆಗೆ ಶಿವರಾಂ ಪೇಟೆಯಲ್ಲಿರುವ ಶ್ರೀ ಪಾಂಡುರಂಗ ಪವರ್ ಪ್ರೆಸ್‌ನಲ್ಲಿ ನನ್ನ ಪ್ರಥಮ ಉದ್ಯೋಗ ಪರ್ವ ಆರಂಭವಾಯಿತು. ದಿನಕ್ಕೊಂದು ರೂಪಾಯಿ ಪಗಾರ, ಬೆಳಿಗ್ಗೆ ಮನೆಯಿಂದ ಕಾಲ್ನಡಿಗೆಯಲ್ಲಿ ಹೊರಟು ಮುದ್ರಣಾಲಯವನ್ನು ೮–೦೦ ಘಂಟೆಗೆ ತಲುಪಿದರೆ ಹಿಂದಿರುಗುವುದು ರಾತ್ರಿ ೮–೦೦ ಘಂಟೆಯಾದ ಮೇಲೆಯೇ. ಮಧ್ಯಾಹ್ನ ೧–೦೦ ಘಂಟೆಗೆ ಊಟಕ್ಕೆ ಬೈಸಿಕಲ್‌ನಲ್ಲಿ ಮನೆಗೆ ಬರಲು ಅವಕಾಶವಿತ್ತು, ಬೈಸಿಕಲ್‌ನ ಬಾಡಿಗೆಯನ್ನು ಮುದ್ರಣಾಲಯದ ಮಾಲೀಕರೇ ವಹಿಸಿಕೊಂಡಿದ್ದರು.

ಕೆಲಸದ ವೇಳೆಯಲ್ಲಿ ಮುದ್ರಣಾಲಯದ ಬಾಗಿಲು ತೆರೆಯುವುದು, ಕಸ ಗುಡಿಸಿ ನೀರು ಹಾಕುವುದು, ಸಾಮಾನು ಸರಂಜಾಮುಗಳನ್ನು ಒಪ್ಪ ಓರಣವಾಗಿಡುವುದು, ಯಜಮಾನರಿಗೆ ಮುದ್ರಣಕ್ಕೆ ಉಪಯೋಗಿಸುತ್ತಿದ್ದ ಮೊಳೆ ಜೋಡಿಸುವಿಕೆಯಲ್ಲಿ, ಮುದ್ರಣದಲ್ಲಿ ಹಾಗೂ ಸಣ್ಣ ಪುಟ್ಟ ಪುಸ್ತಕಗಳ ಹೊತ್ತಿಗೆಯ ತಯಾರಿಕೆಯಲ್ಲಿ ಮತ್ತು ರಬ್ಬರ್ ಅಚ್ಚೊತ್ತುಗಳನ್ನು ತಯಾರಿಸುವ ಕೆಲಸಗಳಲ್ಲಿ ಸಹಾಯ ಮಾಡುವುದಲ್ಲದೆ, ಗಿರಾಕಿಗಳು ಬಂದರೆ ಚಹ, ಕಾಫಿ ತಂದುಕೊಡುವುದು,

ಕೆಲವೊಮ್ಮೆ ಗಿರಾಕಿ ನಿರಾಕರಿಸಿದರೆ ತಂದ ಕಾಫ಼ಿ, ಚಹಾ ನನ್ನ ಪಾಲಾಗುವುದು ನಡೆದಿತ್ತು.

ನಾನಿದ್ದ ಮುದ್ರಣಾಲಯಕ್ಕೆ ಮೈಸೂರಿನ ಕೆಲವು ಪ್ರತಿಷ್ಠಿತ ಶಾಲೆಗಳಲ್ಲಿ ನಡೆಯುವ ಪರೀಕ್ಷೆಯ ಪ್ರಶ್ನೆಪತ್ರಿಕೆಗಳನ್ನು ಮುದ್ರಿಸಲು ಬೇಡಿಕೆ ಇರುತ್ತಿತ್ತು. ಆಗೆಲ್ಲಾ ಮಾಲೀಕರಿಂದ  ನಿನ್ನನ್ನು ಯಾರಾದರೂ ವಿಧ್ಯಾರ್ಥಿಗಳೋ ಅಥವಾ ಇನ್ಯಾರಾದರೋ ಪ್ರಶ್ನೆಪತ್ರಿಕೆಯ ಬಗ್ಗೆ ವಿಚಾರಿಸಿದರೆ ಬಾಯಿ ಬಿಡಕೂಡದು  ಎಂದು ಕಟ್ಟಪ್ಪಣೆಯಾಗುತ್ತಿತ್ತು.

ಯಾವುದಾದರು ಹಬ್ಬ ಹರಿದಿನಗಳ ಪ್ರಯುಕ್ತ ಕೆಲವೊಮ್ಮೆ ನನಗೆ ಊಟಕ್ಕೆ ಆಹ್ವಾನವಿರುತ್ತಿತ್ತು ಮುದ್ರಣಾಲಯದ ಮಾಲೀಕರ ಮನೆಯಿಂದ, ಮಾಲೀಕರು ವೈಶ್ಯರಾಗಿದ್ದು ಮಡಿ ಮೈಲಿಗೆ ಎಂದು ನನ್ನನ್ನು ಕೋಣೆಯ ಹೊರ ಬಾಗಿಲಿನ ಬಳಿ ಪ್ರತ್ಯೇಕವಾಗಿ ಕೂರಿಸಿ ಊಟ ಬಡಿಸುತ್ತಿದ್ದ ವೈಖರಿಯಿಂದ ನಿಜಕ್ಕೂ ಮನಸ್ಸಿಗೆ ಬಹಳ ನೋವಾಗುತ್ತಿತ್ತು. ಅಸ್ಪೃಶ್ಯತೆಯ ಅವಮಾನದಿಂದ ಕುಗ್ಗುವಂತಾದರೂ, ಖಡಾಖಂಡಿತವಾಗಿ ಆಹ್ವಾನವನ್ನು ನಿರಾಕರಿಸಲು ಮನಸ್ಸಿನಲ್ಲಿ ಧೈರ್ಯ ಸಾಲದೆ ಒಳಗೊಳಗೇ ಬೇನೆಯನ್ನನುಭವಿಸುತ್ತಿದ್ದೆ, ಯಾಕಾದರೂ ಕರೆಯುತ್ತಾರೋ ಈ ತರಹದ ಮರ್ಯಾದೆ ಮಾಡಲು ಎಂದುಕೊಂಡು!

ಮುದ್ರಣಾಲಯದ ಎದಿರು ಸಮಾರಂಭಗಳಿಗೆ ಧ್ವನಿ ಮತ್ತು ಪೆಟ್ರೋಮ್ಯಾಕ್ಸ್ ದೀಪದ ಬೆಳಕನ್ನು ಬಾಡಿಗೆಗೆ ಒದಗಿಸುವ  ಆನಂದ್ ಸೌಂಡ್ ಸಿಸ್ಟಮ್ಸ್  ಎಂಬ ಅಂಗಡಿ ಇದ್ದು, ಅಲ್ಲಿ ಹಣ ಪಾವತಿಸಿ ಕೋರಿಕೆಯ ಮೇರೆಗೆ ವಿವಿಧ ಭಾಷೆಗಳ ಚಲನಚಿತ್ರ ಗೀತೆಗಳನ್ನು ಆಲಿಸಬಹುದಿತ್ತು. ದಿನವಿಡೀ ಅಲ್ಲಿ ಗಿರಾಕಿಗಳು ಮುಗಿಬಿದ್ದು ಸುಶ್ರಾವ್ಯವಾದ ಗೀತೆಗಳನ್ನು ಅಲ್ಲೇ ಪಕ್ಕದಲ್ಲಿದ್ದ ಚಹದಂಗಡಿಯಲ್ಲಿನ ಚಹಾವನ್ನೋ ಅಥವಾ ಕಾಫ಼ಿಯನ್ನೋ ಹೀರುತ್ತ ಆಲಿಸುತ್ತಿದ್ದರು. ಇದರ ಫಲಿತಾಂಶ ನನಗೆ ಉಚಿತ ಮನೋರಂಜನೆ!

ಸುಮಾರು ನಾಲ್ಕು ತಿಂಗಳು ಕಳೆದಿರಬೇಕು. ಯಾವುದೋ ಹಬ್ಬ, ಊರಿನಿಂದ ನೆಂಟರು ನಮ್ಮ ಮನೆಗೆ ಬರುವವರಿದ್ದರು. ನೆಂಟರು ಹಿಂದಿರುಗುವವರೆಗೂ ನೀನೇನೂ ಕೆಲಸಕ್ಕೆ ಹೋಗುವುದು ಬೇಡ, ಅವರೇನಾದರೂ ಅಂದುಕೊಂಡರೆ? ಎಂದರು ಅಮ್ಮ! ಸರಿ,  ರೋಗಿ ಬಯಸಿದ್ದು ಹಾಲು ಅನ್ನ, ವೈದ್ಯ ಹೇಳಿದ್ದೂ ಹಾಲು ಅನ್ನ ಎಂಬಂತೆ ಬಂದವರೊಂದಿಗೆ ಒಂದು ವಾರ ಸಂತೋಷವಾಗಿ ತಿಂದುಂಡು ತಿರುಗಿ ಕಾಲ ಕಳೆದಾಗಿತ್ತು.

ಪ್ರತೀದಿನ ಭಾನುವಾರವಲ್ಲವಲ್ಲಾ? ನೆಂಟರು ಹೋದ ಮೇಲೆ ಮತ್ತೆ ಕೆಲಸಕ್ಕೆ ಹಾಜರಾಗುವ ದಿನ ಬಂತು! ನನಗೆ ಹಿಂಜರಿಕೆ ಹೋಗಲು, ಯಾಕೆಂದರೆ ಮುದ್ರಣಾಲಯದ ಮಾಲೀಕರಿಗೆ ನನ್ನ ರಜೆಯ ವಿಚಾರವಾಗಿ ಮುಂಚೆ ತಿಳಿಸಿರಲಿಲ್ಲ. ಒಂದು ವಾರದ ನಂತರ ಹೋಗುತ್ತಿರುವೆ, ಅವರಂತೂ ಏನಾದರು ಅನ್ನುತ್ತಾರೆ, ಉತ್ತರಿಸಲು ಕಷ್ಟ ಎಂದುಕೊಂಡು ಕೆಲಸಕ್ಕೆ ಹೋಗೊಲ್ಲಾ ಎಂದು ಅಮ್ಮನಿಗೆ ಹೇಳಿದೆ. ಸರಿ ಅಲ್ಲಿಗೆ ಹೋಗದಿದ್ದರೆ ಬೇರೆಲ್ಲಾದರು ಕೆಲಸಕ್ಕೆ ಹೋಗೆಂದರು ತಂದೆಯವರು ಚೆನ್ನಾಗಿ ಬೈದು.

ನಾವಿದ್ದ ಬಾಡಿಗೆ ಮನೆಯ ಮಾಲೀಕರಾದ ವೆಂಕಟಪ್ಪನವರ ಸಹಾಯದಿಂದ ಹತ್ತಿರದಲ್ಲೇ ಇದ್ದ ಲಕ್ಷ್ಮೀ ಭಂಡಾರವೆನ್ನುವ ದಿನಸಿ ಅಂಗಡಿಯಲ್ಲಿ ಪೊಟ್ಟಣ ಕಟ್ಟುವ ಕೆಲಸ ದೊರಕಿತು.

ಹೈಸ್ಕೂಲಿಗೆ ದಾಖಲಾಗುವ ಮುನ್ನ, ವೆಂಕಟಪ್ಪನವರೊಂದಿಗೆ ಸಾಧ್ಯವಾದಾಗಲೆಲ್ಲಾ ಶುಕ್ರವಾರ ಬೆಳಿಗ್ಗೆ ಐದು ಘಂಟೆಗೆ ಮನೆಯಿಂದ ಕಾಲ್ನಡಿಗೆಯಲ್ಲಿ ಹೊರಟು ಚಾಮುಂಡಿ ಬೆಟ್ಟ ಹತ್ತಿ ಚಾಮುಂಡೇಶ್ವರಿ ಅಮ್ಮನವರ ದರ್ಶನ ಮಾಡಿ ಬರುತ್ತಿದ್ದೆ.

ಲಕ್ಷ್ಮೀ ಭಂಡಾರದಲ್ಲೂ ಅಷ್ಟೆ, ದಿನಗೂಲಿ ಒಂದು ರೂಪಾಯಿ. ಅಲ್ಲೋ ವ್ಯಾಪಾರ ಬಲು ಚೆನ್ನಾಗಿ ನಡೆಯುತ್ತಿತ್ತು ಕಾರಣ ಆ ಅಂಗಡಿಯಷ್ಟು ದೊಡ್ಡದು ಹತ್ತಿರದಲ್ಲಿ ಎಲ್ಲೂ ಇರಲಿಲ್ಲ.

ನನಗೆ ಅಲ್ಲಿನ ಚಟುವಟಿಕೆಯಲ್ಲಾ ಹೊಸದು. ಗಿರಾಕಿಗಳು ಹೇಳಿ ಕಟ್ಟಿಸುತ್ತಿದ್ದ ಪದಾರ್ಥಗಳ ಸಂಖ್ಯೆ ಬಹು ದೊಡ್ಡದಿರುತ್ತಿತ್ತು. ಆ ರಾಶಿಯನ್ನೆಲ್ಲಾ ಗಲ್ಲದ ಹತ್ತಿರ ಇರಿಸಿ ಕಟ್ಟಿದ ದಿನಸಿಯ ಹೆಸರು ಮತ್ತು ತೂಕದ ಪ್ರಮಾಣವನ್ನು ಹೇಳುವಷ್ಟರಲ್ಲಿ ಜೀವ ಕೈಗೆ ಬರುತ್ತಿತ್ತು. ಏಕೆಂದರೆ ಸರಿ ಸುಮಾರು ಎಲ್ಲಾ ಮರೆತು ಹೋಗಿರುತ್ತಿತ್ತು. ಗಲ್ಲದಲ್ಲಿರುವವರು ಚೆನ್ನಾಗಿ ಬೈಯುತ್ತಿದ್ದರು, ಆಗಿನ ನನ್ನ ಸ್ಥಿತಿಯು ಗಿರಾಕಿಗಳಿಗೆ ಕೋಪ ಬರಿಸುತ್ತಿತ್ತು ಇಲ್ಲವೆ ನಗೆ ತರಿಸುತ್ತಿತ್ತು. ಕಡೆಗೆ ಅಂಗಡಿಯ ಮಾಲೀಕರ ಸಹೋದರ "ನಿನಗೆ ಕೆಲಸ ಕುದುರುವ ತನಕ, ಉಗ್ರಾಣದಿಂದ ಸಾಮಾನು ಸರಂಜಾಮುಗಳನ್ನು ತಂದು ಖಾಲಿಯಾದ ಖಾನೆಗಳಿಗೆ ತುಂಬಿಸು, ಎರಡು ಮೂರು ಪದಾರ್ಥಗಳಾದರೆ ಮಾತ್ರ ಗಿರಾಕಿಗಳನ್ನು ಗಮನಿಸು" ಎಂದರು.

ಮಬ್ಬುಗತ್ತಲಿನೊಂದಿಗೆ ವಿಚಿತ್ರ ವಾಸನೆ ಅಡರಿದ ಉಗ್ರಾಣದಿಂದ ದಿನಸಿ ಧಾನ್ಯಗಳನ್ನು ತಂದು ಖಾಲಿಯಾದ ಖಾನೆಗಳನ್ನು ಭರ್ತಿ ಮಾಡುವ ಕೆಲಸ

ಸುಲಭದ್ದಾಗಿತ್ತು, ಆದರೆ ಈರುಳ್ಳಿ ಮೂಟೆಯನ್ನು ಬಿಚ್ಚಿ ಕೊಳೆತವುಗಳನ್ನು ಬೇರ್ಪಡಿಸುವಾಗ ನಾಸಿಕಕ್ಕಾಗುತ್ತಿದ್ದ ಯಾತನೆ ಮಾತ್ರ ಸಹಿಸಲಾಗದೆ ಸಾಧ್ಯವಾದಷ್ಟು ಗಟ್ಟಿಯಾಗಿ ಉಸಿರನ್ನು ಬಿಗಿ ಹಿಡಿದು ತರಾತುರಿಯಲ್ಲಿ ವಿಂಗಡಣಾ ಕಾರ್ಯ ಮುಗಿಸಿ ಉಗ್ರಾಣದಿಂದ ಹೊರಕ್ಕೆ ದೌಡಾಯಿಸುತ್ತಿದ್ದೆ!

ಕೆಲವೊಮ್ಮೆ ಅಕ್ಕಿಯ ಶ್ರೇಣಿಯ ವ್ಯತ್ಯಾಸ ಅರಿವಾಗದೇ ಬದಲೀ ಶ್ರೇಣಿಯ ಅಕ್ಕಿಯಿರುವ ಖಾನೆಗೆ ಸುರಿಯುವಾಗ ಮಾಲೀಕರ ಗಮನಕ್ಕೆ ಬಂದು ಮುಖಕ್ಕೆ ಮಂಗಳಾರತಿಯಾಗಿ ಇನ್ನು ಮುಂದೆ ಅಕ್ಕಿ ಸುರಿಯುವ ಮುನ್ನ ನನ್ನನ್ನು ಕೇಳು ಎಂಬ ಆದೇಶವಾಗುತ್ತಿತ್ತು.

ಅಂಗಡಿಯಲ್ಲಿ ಸ್ಪಿರಿಟ್ ಅನ್ನು ಸಹ ಮಾರುತ್ತಿದ್ದರು. ಸ್ಪಿರಿಟ್‌ನ ಖಾಯಂ ಗಿರಾಕಿಗಳೆಂದರೆ ಜಾಡಮಾಲಿಗಳು. ಅವರು ತಂದ ಬಾಟಲಿ ಅಥವಾ ಪುಟ್ಟ ತಗಡಿನ ಡಬ್ಬವನ್ನು ಪಡೆದು ಉಗ್ರಾಣದ ಮೂಲೆಯಲ್ಲಿರುತ್ತಿದ್ದ ಪೀಪಾಯಿಯಿಂದ ಬಾಟಲಿ ಅಥವ ಡಬ್ಬಕ್ಕೆ ತುಂಬುವಾಗ ಸ್ಪಿರಿಟ್‌ನ ತೀವ್ರವಾದ ಘಾಟಿಗೆ ಕಣ್ಣಲ್ಲಿ ನೀರಿಳಿಯುತ್ತಿತ್ತು.

ತಿಂಗಳೆರಡು ಕಳೆದಿರಬೇಕು, ಇಲ್ಲಿ ಸಮಯ ತೆವಳಲು ಸಹ ಬಹು ಪ್ರಯಾಸ ಪಡುತ್ತಿತ್ತು. ಪ್ರತೀ ದಿನ ಅವಮಾನದಿಂದ ಬೇಸರವೆನಿಸುತ್ತಿತ್ತು.

ಕಾರಣ ನೆನಪಿಲ್ಲ, ಮತ್ತೊಮ್ಮೆ ನೆಂಟರ ಆಗಮನದ ಸೂಚನೆ ಬಂತು! ಮತ್ತದೇ ಆದೇಶ, ಕೆಲಸಕ್ಕೆ ಹೋಗುವುದು ಬೇಡ ಅವರಿರುವತನಕ. ಬಂದ ನೆಂಟರು ಹಿಂದಿರುಗುವ ಮುನ್ನವೇ ನಿರ್ಧರಿಸಿದ್ದೆ ಲಕ್ಷ್ಮೀ ಭಂಡಾರಕ್ಕೆ ಇನ್ನೆಂದು ಹೋಗಬಾರದೆಂದು. ಸಮಯಕ್ಕೆ ತಕ್ಕ ಹಾಗೆ ಎನ್ನುವಂತೆ ನನ್ನ ಸ್ನೇಹಿತ ಶ್ಯಾಮರಾವ್ ಸಿಕ್ಕಿ "ಮೋಹನ, ಒಂದು ಕೆಲಸ ಇದೆ, ಗಂಧದ ಕಡ್ಡಿಗಳನ್ನು ಪ್ಯಾಕ್ ಮಾಡುವುದು, ದಿನಕ್ಕೆ ನಾಲ್ಕು ರೂಪಾಯಿ ಕೂಲಿ" ಎಂದ!

ನನಗೋ ಎಲ್ಲಿಲ್ಲದ ಸಂತೋಷ. ಪೊಟ್ಟಣಗಳ ರಾಶಿಯ ಲೆಕ್ಕ ಕೊಡುವ ಅವಶ್ಯಕತೆ ಇಲ್ಲ, ಕೊಳೆತ ಈರುಳ್ಳಿಯನ್ನು ಬೇರ್ಪಡಿಸುವಂತಿಲ್ಲ, ಮಾಲೀಕರಿಂದ ಬೈಗುಳದ ಸುರಿಮಳೆ ಇಲ್ಲ ಹೀಗೇ ಅನಾನುಕೂಲತೆಯ ಪಟ್ಟಿ ಉದ್ದಕ್ಕೆ ಬೆಳೆಯುವುದರ ಜೊತೆಗೆ ಕೂಲಿಯಲ್ಲಿ ಬಡ್ತಿ ಬೇರೇ ಎಂದು! ಯಾರಿಗೆ ಬೇಡ ಈ ಅವಕಾಶ?

ಮೈಸೂರಿನ ಜಯನಗರದಲ್ಲಿನ ಚಂಪಕ ಅಗರಬತ್ತಿ ಕಾರ್ಖಾನೆಗೆ ಸೇರಿದ್ದಾಯಿತು.

ಅಲ್ಲಿನ ದಿನಚರಿಯೆಂದರೆ ಮೊದಲನೇ ಮಹಡಿಯಲ್ಲಿದ್ದ ವಿಶಾಲವಾದ ಹಜಾರದಲ್ಲಿ ಮೂರ್ನಾಲ್ಕು ಜನರ ಸಣ್ಣ ಸಣ್ಣ ಗುಂಪುಗಳಲ್ಲಿ ಬೆಳಿಗ್ಗೆ ೮-೦೦

ಘಂಟೆಗೆ ಕಾಲು ಮಡಚಿ ನೆಲದ ಮೇಲೆ ಕುಳಿತು ಸುತ್ತಾ ಗಂಧದ ಕಡ್ಡಿಗಳ ಕಟ್ಟುಗಳು, ಚಪ್ಪಟೆಯಾಗಿರುವ ದಪ್ಪ ಕಾಗದದ ಡಬ್ಬಗಳ ಕಟ್ಟು, ಸಂಖ್ಯೆಗನುಗುಣವಾಗಿ ಗಂಧದ ಕಡ್ಡಿಗಳನ್ನು ಸುತ್ತಲು ಸರಿಯಾದಳತೆಗೆ ತುಂಡರಿಸಿದ ಬೆಣ್ಣೆಕಾಗದದ ಕಟ್ಟುಗಳು ಮತ್ತು ದಪ್ಪ ಕಾಗದದ ಡಬ್ಬವನ್ನು ಭದ್ರವಾಗಿ ಎರಡೂ ಬದಿಯಲ್ಲಿ ಮುಚ್ಚಲು ಅಂಟು ಕಾಗದದ ಕಟ್ಟನ್ನು ಜೋಡಿಸಿಕೊಂಡು ಕೆಲಸ ಆರಂಭಿಸಿದರೆ ಮಧ್ಯಾಹ್ನ ೧೨–೩೦ಕ್ಕೆ ಏಳುವುದು ಊಟದ ವಿರಾಮದ ಸಲುವಾಗಿ, ಮತ್ತೆ ೧–೦೦ ಘಂಟೆಯಿಂದ ಸಂಜೆ ೬–೩೦ ಘಂಟೆಯತನಕ ಕುಳಿತಿರಬೇಕಾಗಿತ್ತು.

ಒಂದೇ ಕಡೆ ಕುಳಿತು ಕಾಲಿನ ಮಂಡಿ, ಮೀನ ಖಂಡ ಹಿಡಿದುಕೊಂಡು ನೋವಾಗುತ್ತಿತ್ತು. ಇಲ್ಲಿನ ಪ್ರತಿಶತ ತೊಂಬತ್ತು ಭಾಗ ಕಾರ್ಮಿಕರು ಮುಸಲ್ಮಾನರಾಗಿದ್ದು ಬೆರಳೆಣಿಕೆಯಷ್ಟೆ ಮಾತ್ರ ಬೇರೆಯವರಿದ್ದದ್ದು. ಅಲ್ಲಿ ಕೆಲಸ ಮಾಡುತ್ತಿದ್ದ ಒಬ್ಬ ಹುಡುಗನ ತಂದೆ 'ನಾ ನಿನ್ನ ಮರೆಯಲಾರೆ' ಚಲನಚಿತ್ರದಲ್ಲಿ ರಾಜ್‌ಕುಮಾರ್‌ಗೆ ಡ್ಯೂಪ್ ಆಗಿ ಮೋಟಾರ್ ಬೈಕ್ ಸಾಹಸ ಮಾಡಿದ್ದ ಲಕ್ಷ್ಮಣ್ ಎಂದು ತಿಳಿದು ಅಂತಹವರ ಮಗನೆಂದು ಒಂದೆಡೆ ಸಂತೋಷವಾದರೆ ಮತ್ತೊಂದೆಡೆ ಅಂತಹವರ ಮಗನಾಗಿಯೂ ಇಲ್ಲಿ ಕೂಲಿ ಕೆಲಸ ಮಾಡುತ್ತಿದ್ದಾನಲ್ಲಾ ಎಂಬ ವ್ಯಥೆ. ಇತ್ತೀಚೆಗೆ ಇಲ್ಲಿ ಸಮಯ ಸ್ವಲ್ಪ ವೇಗವಾಗಿ ಸಾಗುತ್ತಿರುವಂತೆ ಭಾಸವಾಗುತ್ತಿತ್ತು.

ಸ್ನೇಹಿತ ಶ್ಯಾಮರಾವ್‌ಗೂ ಇಲ್ಲಿನ ಕೆಲಸ ಹಿಡಿಸಿರಲಿಲ್ಲ, ಒಂದೇ ಕಡೆ ಅಲುಗಾಡದೆ ಕುಳಿತು ದಿನವಿಡೀ ಕಳೆಯುವುದು ವ್ಯಸನಕ್ಕೀಡು ಮಾಡಿತ್ತು. ಮುಂದೊಂದು ದಿನ ಅವನು ಒಂದು ಪ್ರಸ್ತಾಪದೊಡನೆ ಬಂದ! ಮೋಹನ, ಇಂಡಸ್ಟ್ರಿಯಲ್ ಸಬರ್ಬ್‌ನಲ್ಲೊಂದು ಕಲ್ಲಿನ ಫ್ಯಾಕ್ಟರಿ ಇದೆಯಂತೆ, ದಪ್ಪ ದಪ್ಪ ಸೈಜುಗಲ್ಲುಗಳನ್ನು ಎತ್ತಿ ಯಂತ್ರಕ್ಕೆ ಹಾಕುವ ಕೆಲಸ, ಸುಮ್ಮನೆ ಇಲ್ಲಿಯ ತರಹ ಶಿಲೆಯಂತೆ ಒಂದೇ ಕಡೆ ಸ್ಥಾಪಿತವಾಗಿರಬೇಕಿಲ್ಲ. ಬದಲಿಗೆ ಶಿಲೆಯೊಡನೆ ಓಡಾಡಿಕೊಂಡು ಮಾಡುವ ಕೆಲಸ. ನನಗೋ ಕೆಲಸದ ವಿವರಕ್ಕಿಂತ ಸಂಬಳದ ವಿಚಾರ ಹೆಚ್ಚು ಆಕರ್ಷಕವಾಗಿತ್ತು. ಇಲ್ಲಾದರೆ ದಿನಕ್ಕೆ ನಾಲ್ಕು ರೂಪಾಯಿ ಕೂಲಿ, ಅಲ್ಲಿ ದಿನಕ್ಕೆ ಆರು ರೂಪಾಯಿಗಳು! ಸರಿ, ಮತ್ತಿನ್ನೇನು? ಆ ವಾರದ ಬಟವಾಡೆಯಾದೊಡನೆ ಯಜಮಾನರಿಗೆ ವಿದಾಯ ಹೇಳಿ ಕಲ್ಲಿನ ಕಾರ್ಖಾನೆಯಲ್ಲಿನ ಉದ್ಯೋಗವನ್ನು ಪಕ್ಕಾ ಮಾಡಿಕೊಂಡಾಗಿತ್ತು.

ಚಾಮುಂಡಿ ಮೈನಿಂಗ್ ಅಂಡ್ ಮಿನರಲ್ ಇಂಡಸ್ಟ್ರಿಯಲ್ಲಿ ದಿನಕ್ಕೆ ಮೂರು ಪಾಳಿಯಲ್ಲಿ ಕೆಲಸ ಸಾಗುತ್ತಿತ್ತು. ನನ್ನ ಮೊದಲನೇ ದಿನದ ಕೆಲಸ ಎರಡನೇ

ಪಾಳಿಯಲ್ಲಿ ಮಧ್ಯಾಹ್ನ ೨-೦೦ ಘಂಟೆಗೆ ಆರಂಭವಾದದ್ದು ರಣ ಬಿಸಿಲಿನ ಅಡಿಯಲ್ಲಿ ನೆರಳಿಲ್ಲದ, ಕಲ್ಲಿನ ಧೂಳುಮಯ ವಾತಾವರಣದಲ್ಲಿ ಯಂತ್ರಗಳು ಮಾಡುತ್ತಿದ್ದ ಕರ್ಕಶ ಸದ್ದಿನೊಡನೆ ತಲೆಗೊಂದು ಅಂಗವಸ್ತ್ರ ಹೊದ್ದು, ಬಾಯಿ ಮೂಗು ಮುಚ್ಚುವಂತೆ ಮತ್ತೊಂದು ಅಂಗವಸ್ತ್ರವನ್ನು ಕಟ್ಟಿಕೊಳ್ಳುವುದರ ಮೂಲಕ.

ಇಲ್ಲಿಯ ಉತ್ಪಾದನಾ ಕ್ರಮವೆಂದರೆ, ಮೊದಲು ದೊಡ್ಡ ಗಾತ್ರದ ಕಲ್ಲುಗಳನ್ನು ಜಾ ಕ್ರಷರ್ ಎಂಬ ಯಂತ್ರದಲ್ಲಿ ಹಾಕುವುದು. ಆ ಯಂತ್ರವು ಕಲ್ಲನ್ನು ಚಚ್ಚಿ ಮಧ್ಯಮ ಗಾತ್ರಕ್ಕೆ ಇಳಿಸುತ್ತಿತ್ತು. ಮಧ್ಯಮ ಗಾತ್ರದ ಕಲ್ಲುಗಳು ಜಾ ಕ್ರಷರ್ ಯಂತ್ರದ ಕೆಳಗೆ ಅಳವಡಿಸಿರುವ ಬೆಲ್ಟ್ ಕನ್ವೆಯರ್ ಮೇಲೆ ಬೀಳುತ್ತಿತ್ತು. ನಿರಂತರವಾಗಿ ಸುತ್ತುತ್ತಿರುವ ಸುಮಾರು ಹದಿನೈದು ಮೀಟರ್ ಉದ್ದದ ಕನ್ವೆಯರ್ ಮೂಲಕ ಮಧ್ಯಮ ಗಾತ್ರದ ಕಲ್ಲುಗಳು ಸಾಗಿ, ಮುಂದೆ ವಿರುದ್ಧ ದಿಕ್ಕಿನಲ್ಲಿ ತಿರುಗುತ್ತಿರುವ ಎರಡು ದೊಡ್ಡ ಕಲ್ಲಿನ ರೋಲರ್‌ಗಳ ಮೂಲಕ ಹಾದು ಸಣ್ಣ ಜೆಲ್ಲಿ ಕಲ್ಲಾಗಿ ಮಾರ್ಪಾಡಾಗಿ ಕೆಳಗೆ ಬೀಳುತ್ತಿತ್ತು. ಮುಂದೆ ಆ ಸಣ್ಣ ಜೆಲ್ಲಿ ಕಲ್ಲುಗಳನ್ನು ಹಿಟ್ಟಿನ ಗಿರಣಿಯಂತಿರುವ ಯಂತ್ರದಲ್ಲಿ ಹಾಕಿದರೆ ಕಲ್ಲಿನ ಪುಡಿ ಒಂದು ಕಡೆ ಹಾಗೂ ಕಲ್ಲಿನ ಧೂಳು ಮತ್ತೊಂದು ಕಡೆ ಶೇಖರಗೊಳ್ಳುತ್ತಿತ್ತು. ನಂತರ ಕಲ್ಲಿನ ಪುಡಿಯನ್ನು ೫೦ ಕೆ.ಜಿ ಹಾಗೂ ಕಲ್ಲಿನ ಧೂಳನ್ನು ೨೫ ಕೆ.ಜಿ ಪ್ರಮಾಣಕ್ಕೆ ತೂಗುವಂತೆ ಚೀಲಕ್ಕೆ ತುಂಬಿಸಿ ದಬ್ಬಳ ಹಾಗೂ ಸುತ್ಲಿ ದಾರದ ಸಹಾಯದಿಂದ ಹೊಲೆದು ಪ್ರತ್ಯೇಕವಾಗಿ ಚೀಲಗಳನ್ನು ಪೇರಿಸಬೇಕಿತ್ತು.

ನನಗೆ ಆದೇಶಿಸಿದ ಪ್ರಥಮ ಕೆಲಸ, ರೋಲರ್‌ಗಳ ಮಧ್ಯದಿಂದ ಕೆಳಗೆ ಸುರಿಯುವ ಜೆಲ್ಲಿ ಕಲ್ಲನ್ನು ಸನಿಕೆಯ ಸಹಾಯದಿಂದ ಎಳೆದೆಳೆದು ಪಕ್ಕಕ್ಕೆ ಬಿಡಬೇಕು. ಇಲ್ಲದಿದ್ದರೆ ಅಲ್ಲೇ ಶೇಖರಗೊಂಡ ಜಲ್ಲಿ ಕಲ್ಲುಗಳು ರೋಲರ್‌ಗಳನ್ನು ಸ್ಥಗಿತಗೊಳಿಸಿಬಿಡುತ್ತಿತ್ತು. ಸನಿಕೆಯನ್ನು ಕೈಯಲ್ಲಿ ಹಿಡಿದಿದ್ದು ಮೊದಲನೇ ಬಾರಿ. ಏನೇ ಹರಸಾಹಸ ಮಾಡಿದರೂ ಜೆಲ್ಲಿಯನ್ನು ಎಳೆಯಲಾಗುತ್ತಿಲ್ಲಾ! ಮೈ ಕೈ ನೋಯಿಸಿಕೊಂಡಿದ್ದಷ್ಟೇ ಆದದ್ದು, ಪರಿಣಾಮ ರೋಲರ್‌ಗಳು ಸ್ಥಗಿತಗೊಂಡವು! ಆಗ ರೋಲರ್ ಯಂತ್ರವನ್ನು ನಿಯಂತ್ರಿಸುತ್ತಿದ್ದ ಶ್ರೀಮತಿ ಲಕ್ಷ್ಮಮ್ಮ ಎಂಬುವರು ಜಾ ಕ್ರಷರ್ ಯಂತ್ರಕ್ಕೆ ಕಲ್ಲುಗಳನ್ನು ಹಾಕುತ್ತಿದ್ದವರಿಗೆ ಕೂಗಿ ಹೇಳಿದರು "ನಿಲ್ಲಿಸ್ರಪ್ಪಾ ಸೊಲ್ಪಾ ಇಲ್ಲಿ ಜ್ಯಾಮ್ ಆಗ್ಯೆತೇ" ನನ್ನ ಕಡೆಗೆ ತಿರುಗಿ "ಏನಪ್ಪಾ, ನಿಂಗೆ ಗುದ್ಲಿ ಕೆಲ್ಸ ಬರಾಕಿಲ್ಲ ಅನ್ಕೋತೀನಿ, ಇತಾಗ್ ಬಾ" ಎಂದು ತಾನೇ ಜೆಲ್ಲಿ ಕಲ್ಲನ್ನೆಲ್ಲಾ ಪಕ್ಕಕ್ಕೆ ಎಳೆದು ಖಾಲಿ ಮಾಡಿ, ಸನಿಕೆಯನ್ನು ಹಿಡಿಯುವುದು ಹಾಗೂ ಜೆಲ್ಲಿ ಕಲ್ಲನ್ನು ಎಳೆಯುವ ತಂತ್ರವನ್ನು ವಿವರಿಸಿದರು ಕನಿಕರದಿಂದ! ನಂತರ ಜೆಲ್ಲಿಕಲ್ಲನ್ನು ಎಳೆಯುವ ಮತ್ತು

ರೋಲರ್‌ಗಳ ನಡುವೆ ಮಧ್ಯಮ ಗಾತ್ರದ ಕಲ್ಲುಗಳನ್ನು ಹಾಯಿಸುವ ಎರಡೂ ಕೆಲಸವನ್ನು ನಾನು ಜೆಲ್ಲಿಕಲ್ಲನ್ನು ಸರಿಯಾದ ಸಮಯದಲ್ಲಿ ತೆರವು ಮಾಡದಿದ್ದರೆ ಮಾಡುತ್ತಿದ್ದ ಆಕೆಯದು ಎಂಥಾ ಉದಾತ್ತ ಮನೋಭಾವ...

ರಾತ್ರಿ ಮನೆಗೆ ಹೋಗುವಾಗ್ಗೆ ಅಂಗೈಗಳಲ್ಲಿ ಬೊಬ್ಬೆ ಎದ್ದು ಉರಿಯುತ್ತಿತ್ತು. ಅಮ್ಮನವರು ಕೊಬ್ಬರಿ ಎಣ್ಣೆ ಸವರಿ ಕಣ್ಣೀರಿಟ್ಟರು. ಸಮಯ ಉರುಳಿದಂತೆ ಬಡ್ತಿ ಸಿಕ್ಕಿತ್ತು ಕೆಲಸದಲ್ಲಿ ನನಗೆ! ಈಗ ದೊಡ್ಡ ಕಲ್ಲುಗಳನ್ನು ಜಾ ಕ್ರಷರ್ ಯಂತ್ರಕ್ಕೆ ಹಾಕಬೇಕಿರಲಿಲ್ಲ, ರೋಲರ್‌ಗಳ ಮೂಲಕ ಬರುವ ಜೆಲ್ಲಿ ಕಲ್ಲನ್ನು ಸನಿಕೆಯಿಂದ ಎಳೆಯಬೇಕಿರಲಿಲ್ಲ ಬದಲಿಗೆ ಜೆಲ್ಲಿ ಕಲ್ಲನ್ನು ಪುಡಿ ಮಾಡುವ ಗಿರಣಿಯಂಥ ಯಂತ್ರವನ್ನು ನಿರ್ವಹಿಸುವ ಕೆಲಸ.

ಆಗಾಗ್ಗೆ ಕಛೇರಿಯಲ್ಲಿನ ಸಿಬ್ಬಂದಿಯವರು ಹತ್ತಿರದಲ್ಲೇ ಇದ್ದ ಟೀ ಅಂಗಡಿಯಲ್ಲಿ ಕಾಫಿ, ಟೀ, ತಿಂಡಿ ಅಥವಾ ಊಟ ತರಲು ಹೇಳುತ್ತಿದ್ದರು. ಆಗೆಲ್ಲಾ ಮಾನಸಿಕವಾಗಿ ಕುಗ್ಗುತ್ತಿದ್ದೆ, ಯಾರಾದರೂ ಪರಿಚಯದವರು ನನ್ನನ್ನು ಈ ಸ್ಥಿತಿಯಲ್ಲಿ ನೋಡಿದರೆ ಅವಮಾನವೆಂದುಕೊಂಡು ಸೈಕಲ್ಲನ್ನೇರಿ ಟೀ ಅಂಗಡಿಗೆ ಹೊರಡುವ ಮುನ್ನ ಧೂಳುಮಯವಾದ ಮೈ, ಬಟ್ಟೆಯನ್ನು ಚೆನ್ನಾಗಿ ಕೊಡವಿಕೊಂಡು, ಕೈ ಕಾಲು ಮತ್ತು ಮುಖವನ್ನು ತೊಳೆಯುತ್ತಿದ್ದೆ.

ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಬಹುತೇಕ ಕೂಲಿಯಾಳುಗಳು ಹೊಲ ಗದ್ದೆಗಳಲ್ಲಿ ದುಡಿಯುವವರಾಗಿದ್ದು ಹೊಲ ಗದ್ದೆಯ ಕೆಲಸವಿಲ್ಲದಿದ್ದರೆ ಮಾತ್ರ ಇಲ್ಲಿ ದುಡಿಯುತ್ತಿದ್ದರು. ಅವರುಗಳಲ್ಲಿ ಶಾಲೆಯ ಮುಖ ಕಂಡವರಂತೂ ತೀರ ವಿರಳ. ಊಟದ ವಿರಾಮದ ವೇಳೆಯಲ್ಲಿ ಸಹಕೂಲಿಯಾಳುಗಳೊಂದಿಗೆ ಒಟ್ಟಿಗೆ ಕುಳಿತು ಊಟ ಮಾಡುತ್ತಿರುವಾಗ ಎಲ್ಲರೂ ಲೋಕಾಭಿರಾಮದ ಮಾತುಕತೆಗಳೊಡನೆ ತಮ್ಮ ಬಗ್ಗೆ, ತಮ್ಮೂರಿನ ಮತ್ತು ತಮ್ಮ ಮನೆಯ ಬಗ್ಗೆ ವಿಚಾರ ವಿನಿಮಯವಾಗಿ ನನ್ನೆಡೆಗೆ ತೂರಿ ಬರುತ್ತಿದ್ದ ಪ್ರಶ್ನೆ–

"ಪ್ರಥಮ ದರ್ಜೆಯೊಂದಿಗೆ ಎಸ್.ಎಸ್.ಎಲ್.ಸಿ ಯಲ್ಲಿ ತೇರ್ಗಡೆ ಹೊಂದಿ ಮುಂದಕ್ಕೆ ಓದದೆ ಈ ಮಣ್ಣು ಹೊರುವ ಕೆಲಸಕ್ಕೆ ಬಂದದ್ದು ಯಾಕೆ?"

ಮನೆಯಲ್ಲಿನ ಅನಾನುಕೂಲತೆಯನ್ನು ಹೇಳಿಕೊಳ್ಳಲಾಗದೆ ಉತ್ತರಿಸಲು ಬಹಳ ಸಂಕಟವೆನಿಸಿ, ನನಗೇ ಓದಲು ಇಷ್ಟವಿರಲಿಲ್ಲ ಎಂದು ತೇಲಿಸುತ್ತಿದ್ದೆ.

ಕಲ್ಲನ್ನು ಪುಡಿ ಮಾಡುವ ಯಂತ್ರದಲ್ಲಿ ಆರು ಕಬ್ಬಿಣದ ಸುತ್ತಿಗೆಯಾಕೃತಿಯಲ್ಲಿರುವ ಬೀಟರ್ಸ್‌ಗಳಿದ್ದು, ಕಲ್ಲನ್ನು ಸತತವಾಗಿ ಪುಡಿ ಮಾಡಿ

ಕ್ರಮೇಣ ಸವೆದಾಗ ಯಂತ್ರದಿಂದ ಹೊರಬರುವ ಕಲ್ಲಿನ ಪುಡಿಯು ಸಪೂರವಾಗಿರದೆ ತರಿತರಿಯಾದಾಗ ಅವುಗಳನ್ನು ಬಿಚ್ಚಿ ಸವೆದ ಭಾಗಕ್ಕೆ ಕಬ್ಬಿಣದ ತುಣುಕನ್ನು ಸೇರಿಸಿ ಬೆಸುಗೆ ಹಾಕಲಾಗುತ್ತದೆ. ಹಾಗೇ ಒಮ್ಮೆ ಸವೆದು ಹೋಗಿದ್ದ ಬೀಟರ್ಸ್‌ಗಳನ್ನು ಕಳಚಿ ಬೆಸುಗೆ ಹಾಕಿಸಲು ಕಾರ್ಖಾನೆಯ ದುರಸ್ಥಿ ವಲಯಕ್ಕೆ ಕೊಂಡೊಯ್ದಾಗ ಅಲ್ಲಿದ್ದ ದುರಸ್ತಿಗಾರ ಸಲಕರಣೆಗಳ ಕೋಣೆಯಿಂದ ಫೈಯಿಲ್ ತಂದುಕೊಡಲು ನನಗೆ ಆದೇಶಿಸಿದ. ಸಲಕರಣೆಗಳ ಕೋಣೆಯೆಲ್ಲಾ ಹುಡುಕಿದರೂ ಫೈಯಿಲ್ ಸಿಗುತ್ತಿಲ್ಲಾ! ಸಮಯ ಕಳೆಯುತ್ತಿದೆ, ಅವನು ತಾಳ್ಮೆಗೆಟ್ಟು "ಏನೋ ಇನ್ನೂ ಸಿಕ್ಲಿಲ್ವಾ ಫೈಯಿಲೂ?" ಎಂದು ಕೂಗಿದ. ಸಿಕ್ಕಲಿಲ್ಲ ಎನ್ನುವ ನನ್ನುತ್ತರ ಕೇಳಿಸಿಕೊಂಡ ಕೂಡಲೇ ಅಲ್ಲಿಂದಲೇ ಅವಾಚ್ಯ ಶಬ್ಧಗಳೊಡನೆ ಬೈದುಕೊಂಡು ಸಲಕರಣೆಗಳ ಕೋಣೆಗೆ ಬಂದು ನನ್ನೆದುರಿಗೇ ತೆಪ್ಪಗೆ ಮಲಗಿದ್ದ ಅರವನ್ನು ತನ್ನ ಕೈಯಲ್ಲಿ ತೆಗೆದುಕೊಂಡು, ಇಲ್ಲೇ ಐತಲ್ಲೋ ಎಂದಾ! ಅವತ್ತೇ ಅರಿವಾದದ್ದು, ಕನ್ನಡದ ಅರವನ್ನು ಆಂಗ್ಲಭಾಷೆಯಲ್ಲಿ ಫೈಯಿಲ್ ಎನ್ನುವರೆಂದು! ನನಗೋ ಫೈಯಿಲ್ ಎಂದರೆ ಗೊತ್ತಿದ್ದದ್ದು ಕಡತಗಳನ್ನು ಬಂಧಿಸಿ ಹೊದಿಸಲು ಉಪಯೋಗಿಸುತ್ತಿದ್ದ ರಕ್ಷಾಕವಚ.

ವಾರದಲ್ಲಿ ಎರಡು ಮೂರು ಸಾರಿ ಲಾರಿಗಳಿಗೆ ಕಲ್ಲುಪುಡಿಯ ಮೂಟೆಗಳನ್ನು ಲೋಡ್ ಮತ್ತು ದೊಡ್ಡ ಕಲ್ಲುಗಳನ್ನು ತುಂಬಿಕೊಂಡು ಬಂದ ಲಾರಿಗಳಿಂದ ಅನ್‌ಲೋಡ್ ಕೂಡ ಮಾಡಬೇಕಿತ್ತು. ಒಂದು ಲಾರಿಗೆ ಮೂಟೆಗಳನ್ನು ಲೋಡ್ ಮಾಡಿದರೆ ೬-೦೦ ರೂಪಾಯಿ ಮತ್ತು ಕಲ್ಲುಗಳನ್ನು ಅನ್‌ಲೋಡ್ ಮಾಡಿದರೆ ೬-೦೦ ರೂಪಾಯಿ ಸಿಗುತ್ತಿತ್ತು. ಇದ್ದೆಲ್ಲಾ ಕೂಲಿಯಾಳುಗಳು ನಾಲ್ಕೈದು ಜನರ ಸಣ್ಣ ಗುಂಪು ಮಾಡಿಕೊಂಡು ಸರದಿಯಲ್ಲಿ ಲೋಡ್ ಅಥವಾ ಅನ್‌ಲೋಡ್ ಮಾಡಿ ಬರುತ್ತಿದ್ದ ದುಡ್ಡನ್ನು ಬಟವಾಡೆಯ ದಿನ ಹಂಚಿಕೊಳ್ಳುತ್ತಿದ್ದೆವು. ಲಾರಿಯಿಂದ ಕಲ್ಲುಗಳನ್ನು ಅನ್‌ಲೋಡ್ ಮಾಡಲು ಹೆಣ್ಣಾಳುಗಳು ಕೂಡ ಭಾಗವಹಿಸುತ್ತಿದ್ದರು.

ಇತ್ತೀಚೆಗೆ ಎಷ್ಟು ಸಲ ಸೀನಿದರೂ, ಕೆಮ್ಮಿದರೂ ಕಲ್ಲಿನ ಧೂಳು ನಿರಂತರವಾಗಿ ಬಾಯಿ ಮೂಗಿನಿಂದ ಬರಲು ಶುರುವಾಗಿತ್ತು, ಮೂಟೆ ಹೊರುತ್ತಿದ್ದುದ್ದರಿಂದ ಬೆನ್ನಿನ ಚರ್ಮ ಕಿತ್ತು ಉರಿಯುತ್ತಿತ್ತು. ಅಮ್ಮನವರು ವಾರಕ್ಕೊಮ್ಮೆ ಸ್ನಾನ ಮಾಡಿಸುವಾಗ ಬೆನ್ನುಜ್ಜಲು ನಾರು ಉಪಯೋಗಿಸದೆ ಬರೀ ಕೈಯಲ್ಲಿ ತಿಕ್ಕಿ ನನ್ನ ಸ್ಥಿತಿಗೆ ಅಳುವುದೊಂದೇ ಉಳಿದಿದ್ದು. ತಂದೆಯವರೊಂದಿಗೆ ಅಮ್ಮನವರು ವಿಷಯ ಹಂಚಿಕೊಂಡಾಗ ನಾನು ಗಮನಿಸಿದ್ದು ಅವರ ನಿರ್ವಿಕಾರತೆಯನ್ನಲ್ಲದೆ ಬೇರೇನನ್ನು ಅರಿಯಲಾಗಲಿಲ್ಲ!

ವಾರಕ್ಕೆ ಮೂವತ್ತಾರು ರೂಪಾಯಿಗಳಿಗೂ ಮಿಕ್ಕದ ಸಂಪಾದನೆ, ಲಾರಿ ಲೋಡ್ ಮತ್ತು ಅನ್‌ಲೋಡ್ ಮಾಡುತ್ತಿದ್ದುದರಿಂದ. ಶನಿವಾರ ಕೈಗೆ ಸಿಗುತ್ತಿದ್ದ

ಬಟವಾಡೆಯನ್ನು ಅಮ್ಮನಿಗೆ ಕೊಟ್ಟು ಭಾನುವಾರ ತಡವಾಗಿ ಎದ್ದು ಅಮ್ಮನ ಕೈಯಲ್ಲಿ ಸ್ನಾನ ಮಾಡಿಸಿಕೊಂಡು ತಿಂಡಿ ತಿನ್ನುವುದು, ಮಧ್ಯಾಹ್ನ ಊಟದ ನಂತರ ಅಂಗಿ ಮತ್ತು ನನ್ನ ಅಳತೆಗೆ ಸರಿ ಹೊಂದುವಂತೆ ಉದ್ದವನ್ನು ಮಾತ್ರ ಮಡಚಿ ಹೊಲೆದಿದ್ದ ತಂದೆಯವರ ಹಳೆಯ ಷರಾಯಿಯನ್ನು ಇದ್ದಲಿನ ಇಸ್ತ್ರಿಪೆಟ್ಟಿಗೆಯಿಂದ ಉಜ್ಜಿ ಸೊಂಟದಿಂದ ಕೆಳಕ್ಕೆ ಜಾರದಂತೆ ಉಡಿದಾರಕ್ಕೆ ಸಿಕ್ಕಿಸಿ ಸಿದ್ಧನಾಗಿ, ಖರ್ಚಿಗೆ ಕಾಸು ಪಡೆದು ಮನೆಯಿಂದ ಹೊರಟು ನೇರವಾಗಿ ಯಾವುದಾದರು ಚಲನಚಿತ್ರಕ್ಕೆ ಟಿಕೇಟ್ ಕೊಂಡು ಪಕ್ಕದ ಹೋಟೆಲ್‌ನಲ್ಲಿ ಮಸಾಲೆ ದೋಸೆ ತಿಂದು ನಾಲಿಗೆ ಸುಡುವ ಬಿಸಿ ಕಾಫಿ ಕುಡಿದು ಜಂ ಅಂತಾ ಚಲನಚಿತ್ರ ವೀಕ್ಷಿಸುವುದಲ್ಲದೇ, ಮಧ್ಯಂತರದ ವೇಳೆಯಲ್ಲಿ ಕೊಂಡ ಬೋಂಡ, ಕಡಲೆ ಮತ್ತು ಹುರಿದ ಬಟಾಣಿಯನ್ನು ತಿನ್ನುತ್ತಾ ಉಳಿದರ್ಧ ಭಾಗದ ಚಲನಚಿತ್ರವನ್ನು ಮುಗಿಸಿ ಮನೆ ಕಡೆಗೆ ಹೊರಟಾಗ ಸ್ವರ್ಗಕ್ಕೆ ಮೂರೇ ಗೇಣು ಎನಿಸುತ್ತಿತ್ತು! ಅಪ್ಪಿ ತಪ್ಪಿ ಯಾವುದಾದರು ಭಾನುವಾರ ಕೆಲಸವಿದ್ದರಂತು ದುಃಖ ಖಚಿತ. ಅಂದಿನ ಆ ಭಾನುವಾರಗಳ ಮಜದ ತೃಪ್ತಿ ಮುಂದೆಂದೂ ಅನುಭವಿಸಲಾಗಲಿಲ್ಲ.



# ಅಧ್ಯಾಯ ೩

# ಭಾರತ ದರ್ಶನ

ವಿದ್ಯಾರ್ಜನೆಯ ಪ್ರವಾಸದ ನಿಮಿತ್ತ ಅಖಂಡ ಭಾರತ ಸುತ್ತಿ ಬರಲು ೧ಸವಿ ೧೯೮೩ರ ನವೆಂಬರ್ ಮಾಸದಲ್ಲಿ ಹೊರಟ ಸಹಪಾಠಿಗಳ ಗುಂಪಿನೊಳಗಿದ್ದ ನನ್ನ ಪರ್ಯಟನೆಯೂ ಮೈಸೂರಿನಿಂದ ರೈಲಿನಲ್ಲಿ ಹೊರಡುವುದರೊಂದಿಗೆ ತದ್ವತ್ತಾಗಿ ಆರಂಭವಾಗಿ ಮದ್ರಾಸ್, ಕಲ್ಕತ್ತಾ, ವಾರಾಣಸಿ, ಹರಿದ್ವಾರ, ಡಾರ್ಜಿಲಿಂಗ್, ದೆಹಲಿ, ಆಗ್ರಾ, ಅಜ್ಮೀರ್, ಮುಂಬೈ, ಹೈದರಾಬಾದ್ ಮತ್ತು ಬೆಂಗಳೂರಿಗೆ ಭೇಟಿ ನೀಡಿ ಮೈಸೂರನ್ನು ವಾಪಸ್ ತಲುಪುವುದರೊಂದಿಗೆ ಮುಗಿದಿತ್ತು.

ಮದ್ರಾಸಿನಲ್ಲಿ ಮರೀನಾ, ಕೋವಲಮ್ ಮತ್ತು ಎಲ್ಲಿಯೊಟ್ ಸಮುದ್ರ ತೀರಗಳೊಂದಿಗೆ ಗಿಂಡಿ ರಾಷ್ಟ್ರೀಯ ಉದ್ಯಾನವನ್ನು ವೀಕ್ಷಿಸಿ ಅಷ್ಟಲಕ್ಷ್ಮಿಯರ ದೇವಸ್ಥಾನದಲ್ಲಿ ದೇವಿಯರ ದರ್ಶನ ಪಡೆದು ಬರ್ಮಾ ಬಜಾರ್‌ನಲ್ಲಿ ಎಡತಾಕಿ ಕಲ್ಕತ್ತಾದ ಹೌರಾ ಕಡೆಗೆ ಹೊರಟೆ.

ಕಲ್ಕತ್ತಾದಲ್ಲಿ, ಹೂಗ್ಲೀ ನದಿಗೆ ಅಡ್ಡಲಾಗಿ ಉಕ್ಕಿನಿಂದ ನಿರ್ಮಿಸಿರುವ ಹೌರಾ ಸೇತುವೆಯನ್ನು ಹಾದು ಇಲ್ಲಿನ ವಿಶೇಷ ರಸ್ತೆ ವಾಹನವಾದ ಬಿರುನಡಿಗೆಯ ವೇಗದಲ್ಲಷ್ಟೇ ಸಾಗುವ ಟ್ರಾಂನಲ್ಲಿ ಸವಾರಿ ಮಾಡಿ ಕಟ್ಟಡದ ಗಾತ್ರದಲ್ಲೂ, ತನ್ನ ಒಡಲೊಳಗೆ ಅಡಗಿಸಿಕೊಂಡಿರುವ ವಿಷಯ ಹಾಗೂ ಪರಿಕರಣಗಳ ಸಂಗ್ರಹದ ಪ್ರಮಾಣದಲ್ಲೂ ಬೃಹತ್ ಆದ ಇಂಡಿಯನ್ ಮ್ಯೂಸಿಯಂ ಅನ್ನು ಸುತ್ತು ಹಾಕಿ, ದಕ್ಷಿಣೇಶ್ವರ ಕಾಳಿ ದೇವಸ್ಥಾನದಲ್ಲಿ ದೇವರ ದರ್ಶನ ಪಡೆದು ಕೊಂಚ ವಿರಮಿಸಿದ ನಂತರ ದೇವಸ್ಥಾನದ ಸಮೀಪದಲ್ಲಿನ ಬಲಿ ಪೀಠದಲ್ಲಿ ಮಹಾ ಪ್ರಮಾಣದಲ್ಲಿ ಕೋಳಿಗಳ ನಿರಂತರ ಬಲಿ ಕೊಡುವಿಕೆಗೆ ಮೂಕಸಾಕ್ಷಿಯಾಗಿ ಭಯ ಮಿಶ್ರಿತ

ಮನೋಭಾವದೊಂದಿಗೆ ಸಂಜೆ ಬಿರ್ಲಾ ತಾರಾಲಯಕ್ಕೆ ತೆರಳಿ ಅಲ್ಲಿನ ಅರ್ಧ ಗೋಳಾಕಾರದ ತೆರೆಯಲ್ಲಿ ಪ್ರದರ್ಶಿಸಿದ ಆಗಸದಲ್ಲಿನ ಅದ್ಭುತ ವಿದ್ಯಮಾನಗಳು ಕಣ್ಮನಗಳಲ್ಲಿ ತುಂಬಿ ಚಕಿತಗೊಂಡು ರಾತ್ರಿಯೂಟಕ್ಕೆ ಸಹಪಾಠಿ ರಿಯಾಝುದ್ದೀನ್ ಎಂಬುವನೊಡನೆ ಬೀದಿ ಬದಿಯಲ್ಲಿನ ರಾತ್ರಿಯ ಆಹಾರ ಮೇಳದಲ್ಲಿ ರೊಟ್ಟಿಯೊಡನೆ ಕೊಟ್ಟಿದ್ದ ಎಂಥದ್ದೋ ಬಿಸಿಬಿಸಿಯಾದ ಕಟುಮಸಾಲೆಯುಕ್ತ ಪಲ್ಯವನ್ನು ಅತೀ ರುಚಿಯಾಗಿದೆ ಎಂದುಕೊಂಡು ಮೆದ್ದಾದ ನಂತರ ತಿಳಿದದ್ದು ತಿಂದ ಪಲ್ಯವನ್ನು ತಯಾರಿಸಲು ಉಪಯೋಗಿಸಿದ್ದದ್ದು ಬಡಾ ಘೋಷ್ ಎಂದು. ಅರಗಿಸಿಕೊಳ್ಳಲು ಕಠಿಣವೆಂಬ ಸತ್ಯವನ್ನರಿತು ಮನಸ್ಸಿನಲ್ಲಿ ವ್ಯಾಕುಲತೆ ಉಂಟಾಯಿತು! ಜೊತೆಗೆ ಅರಿಯದೇ ತಿಂದದ್ದು ಎನಿಸಿ ನನಗೆ ನಾನೇ ಸಮಾಧಾನ ಹೇಳಿಕೊಂಡಿದ್ದೂ ಆಯಿತು. ಮಾರನೆಯ ದಿನ ಇಲ್ಲಿನ ಅಗಾಧವಾದ ಬೆಂಗಾಲ್ ಲ್ಯಾಂಪ್ಸ್ ಕಾರ್ಖಾನೆಗೆ ಭೇಟಿ ಇತ್ತು ಕಾರ್ಖಾನೆಯಲ್ಲಿ ವಿದ್ಯುತ್ ದೀಪ ತಯಾರಿಸುವ ಕಾರ್ಯವೈಖರಿ ಗಮನಿಸಿ ನಿಬ್ಬೆರಗಾಗಿದ್ದೆ!

ಮುಂದೆ ಸಿಲಿಗುರಿಯ ಮುಖಾಂತರ ಡಾರ್ಜಿಲಿಂಗ್ ತಲುಪುವಷ್ಟರಲ್ಲಿ ಇಳಿಸಂಜೆಯಾಗಿತ್ತು. ಅಲ್ಲಿನ ಚಳಿ ಎದುರಿಸಲು ಸಾಕಷ್ಟು ಸಿದ್ಧತೆಗಳಿಲ್ಲದೆ ಬಲು ಪ್ರಯಾಸಪಡಬೇಕಾಯಿತು. ಪ್ರಯಾಣದ ಆಯಾಸದಿಂದ ಹಾಸಿಗೆಗೊರಗಿದ್ದೇ ನೆನಪು. ಬೆಳಗಿನ ಜಾವ ಮೂರೂವರೆ ಘಂಟೆಗೆ ಎಚ್ಚರಿಸಿದಾಗಲೇ ಈ ಲೋಕಕ್ಕೆ ಮತ್ತೆ ವಾಪಸ್ಸಾದದ್ದು. ಅವಸರದಲ್ಲಿ ಶೌಚ ಮುಗಿಸಿ ನೀರಿನ ಕರ್ಮ ಪೂರೈಸಲು ಮಂಜಿನಂತೆ ತಣ್ಣಗೆ ಕೊರೈಸುವ ನೀರನ್ನು ಅರಿವಿಲ್ಲದೆ ಸ್ಪರ್ಶಿಸಿದ ಕೂಡಲೇ ಅನುಭವಿಸಿದ್ದು ಬೆಂಕಿಯನ್ನು ಮುಟ್ಟಿದರೆ ಆಗುವ ಅನುಭವವನ್ನು! ಸಂಕಟದಿಂದಲೇ ಮುಖಮಾರ್ಜನದ ಶಾಸ್ತ್ರ ಮುಗಿಸಿ ಸಿದ್ಧವಿದ್ದ ಜೀಪಿನಲ್ಲಿ ಹೊರಟು ದಾರಿಯಲ್ಲಿ ಸಾಸಿವೆ ಎಣ್ಣೆಯಲ್ಲಿ ಕರಿದ ವಿಚಿತ್ರ ಘಮಲಿನ ಸಮೋಸಾವನ್ನು ಮುಖ ಕಿವಿಚಿಕೊಂಡು ಹೊಟ್ಟೆಯೊಳಗಿಳಿಸಿ ಕೊತ ಕೊತ ಕುದಿಯುತ್ತಿದ್ದ ಖಡಕ್ ಚಹಾವನ್ನು ಗುಟುಕರಿಸಿದಾಗ ಮೈಗೆ ಆಗುತ್ತಿದ್ದ ಹಿತದಿಂದ ಕೊಂಚ ನಿರಾಳವೆನಿಸಿತು!

ಮುಂದುವರೆದು ಟೈಗರ್ ಹಿಲ್ ಎನ್ನುವ ಪ್ರದೇಶ ತಲುಪಿ ನಸುಗತ್ತಲಿನಲ್ಲಿ ಉತ್ಸುಕತೆಯಿಂದ ಉದಯರವಿಯ ಆಗಮನವನ್ನು ನಿರೀಕ್ಷಿಸುತ್ತಾ ಅಲ್ಲಿ ನೆರೆದಿದ್ದ ನೂರಾರು ಪ್ರವಾಸಿಗಳ ಜೊತೆಗೆಯೇ ನನ್ನ ಸಹಪಾಠಿಗಳೊಂದಿಗೆ ನಿಂತೆ.

ಸೂರ್ಯೋದಯಕ್ಕೆ ಸಾಕ್ಷಿಯಾಗಲು ಮನಸ್ಸು ಹಾತೊರೆಯುತ್ತಿದ್ದರೆ ಅದಕ್ಕೆ ವ್ಯತಿರಿಕ್ತವಾಗಿ ಸಮಯ ಉರುಳಲು ಬಹು ಪ್ರಯಾಸ ಪಡುತ್ತಿರುವಂತೆನಿಸಿ ನಮ್ಮ ನಿರೀಕ್ಷಣೆಯ ಸಂಯಮಕ್ಕೆ ಸವಾಲೆಸೆದು ಅಣಕಿಸುತ್ತಿರುವಾಗಲೇ ದೂರದಲ್ಲಿ ಅಚಲ

ಸ್ಥಿತಿಯಲ್ಲಿ ತನ್ನ ಒಡಲಲ್ಲಿ ಹುದುಗಿದ್ದ ಪ್ರಖಂಡ ಶಾಖದಿಂದ ಎಲ್ಲಿ ಪೃಥ್ವಿಯು ಕರಗಿ ನೀರಾಗುವಳೋ ಎಂಬ ಕನಿಕರದಿಂದಲೋ ಎಂಬಂತೆ, ಕಡುತಣ್ಣಗಿರುವ ಮಂಜಿನ ಹಾಸನ್ನು ಹೊದ್ದು ಮಲಗಿರುವ, ನಮ್ಮ ಕಣ್ಣಳತೆಗೆ ನಿಲುಕದ ಕಾಂಚನ್‌ಝಂಗಾ ಪರ್ವತ ಶ್ರೇಣಿಯು ಮಸುಕಾಗಿ ಬೂದು ಬಣ್ಣದಲ್ಲಿ ಗೋಚರಿಸುತ್ತಿದ್ದ ಹಾಗೇ ಉದಯರವಿಯ ನಿತ್ಯಕರ್ಮ ಆರಂಭವಾದ ಸೂಚನೆಯೇನೋ ಎಂಬಂತೆ ದಿಗಂತದಲ್ಲಿ ತೆಳುಗೆಂಪು ಬಣ್ಣ ಪಸರಿಸಿ ಕ್ರಮೇಣ ಹಳದಿ ಮಿಶ್ರಿತ ಲೇಪನದಿಂದ ಕಂಗೊಳಿಸಿ ತದನಂತರ ಕೆಂಪು ಬಣ್ಣವು ಗಾಢವೆನಿಸಿ ಮರುಕ್ಷಣವೇ ಹಳದಿಯ ಛಾಯೆ ಅಧಿಕವೆನಿಸಿ ಸಂಪೂರ್ಣ ಪರ್ವತ ಶ್ರೇಣಿಗೆ ಕನಕಧಾರಣೆಯಾಯಿತೇನೋ ಎನಿಸುತ್ತಿದ್ದರೆ ಕ್ಷಣಾರ್ಧದಲ್ಲಿ ಜಲದಲ್ಲಿ ಮಿಂದು ಸಕಲ ಬಣ್ಣಗಳನ್ನು ತೊಡೆದುಕೊಂಡಂತೆ ಭಾಸವಾಗಿ ಇಡೀ ಪರ್ವತ ಶ್ರೇಣಿಯು ರಜತಮಯವಾಗಿ ಬೆಳ್ಳನೆ ಫಳ ಫಳ ಹೊಳೆಯಲಾರಂಭಿಸಿತು.

ಕಾಂಚನ್‌ಝಂಗಾ ಪರ್ವತ ಶ್ರೇಣಿಯ ಮೇಲೆ ಪ್ರಕೃತಿಯು ಉದಯರವಿಯ ಮೂಲಕ ರಂಗುರಂಗಿನ ಮನಮೋಹಕ ಬಣ್ಣಗಳನ್ನೆರಚಿ ಆಡಿದ ರಂಗಿನಾಟಕ್ಕೆ ಸಾಟಿ ಎಲ್ಲಿದೆ? ಇಂಥಹ ಅಭೂತಪೂರ್ವವಾದ ದೃಶ್ಯವೈಭವವನ್ನು ಸವಿಯಲು ಎರಡು ಕಣ್ಣುಗಳು ಸಾಲದು ಎನ್ನುವ ಭಾವನೆ ಮನಸ್ಸಿನಲ್ಲುಳಿದ್ದದ್ದು ನಿಜ!

ಆ ಸವಿಘಳಿಗೆಯ ಸವಿನೆನಪಿಗೆಂದೇ ನಾನೂ ಮತ್ತು ಶೇಷಗಿರಿ ಇಬ್ಬರು ಜೊತೆಯಲ್ಲಿ ಕಾಂಚನ್‌ಝಂಗಾ ಪರ್ವತಶ್ರೇಣಿಯು ಹಿನ್ನೆಲೆಯಲ್ಲಿ ಇರುವಂತೆ ನಿಂತು ತಕ್ಷಣಕ್ಕೆ ಸೆರೆ ಹಿಡಿದು ಕೊಡುವಂಥಹ ವರ್ಣಮಯ ಭಾವಚಿತ್ರವನ್ನು ತೆಗೆಸಿಕೊಂಡೆವು.

ಪ್ರಕೃತಿಯ ರಮ್ಯ ಓಕುಳಿಯಾಟದ ಲೀಲೆ ಯಿಂದ ತೃಪ್ತನಾದ ಮತ್ತಿನಲ್ಲೇ ತೇಲುತ್ತಾ ಭಾರತದ ಗಡಿ ದಾಟಿ ನೇಪಾಳದ ಕಠ್ಮಂಡುವಿಗೆ ತೆರಳಿದ್ದೆ. ಪಶುಪತಿನಾಥನ ದರ್ಶನ ಮುಗಿಸಿ ಸಹಪಾಠಿಗಳು ವೈವಿಧ್ಯಮಯವಾದ, ಆಕರ್ಷಕವಾದ ಹಾಗೂ ಅಪರೂಪವಾದ ವಸ್ತುಗಳನ್ನು ಖರೀದಿಸುತ್ತಿದ್ದುದ್ದನ್ನು ಗಮನಿಸಿ ಕಣ್ತುಂಬಿಕೊಳ್ಳುವುದಕ್ಕಷ್ಟೇ ಸೀಮಿತವಾಗಿದ್ದ ನನ್ನ ಧನಬಲಕ್ಕೆ ನಿರಾಸೆಯಿಂದಲೇ ತೃಪ್ತನಾಗಬೇಕಾಯಿತು! ಆದರೂ ಪರದೇಶವನ್ನು ಕಂಡು ಹಿಂದಿರುಗಿದ ಭಾರತೀಯರ ಸಾಲಿನಲ್ಲಿ ನಾನೂ ಒಬ್ಬನಾದೆನೆಂಬ ಹೆಮ್ಮೆ ಇತ್ತು!

ವಾರಾಣಸಿ ತಲುಪಿದಾಗ, ಹಿಂದೂ ಧರ್ಮೀಯರ ಮಹತ್ತರ ಅಭಿಲಾಷೆಯಾದ ಸಾಯುವುದರಲ್ಲೊಮ್ಮೆ ಗಂಗಾ ಸ್ನಾನ ಮಾಡಿ ಕಾಶೀ ವಿಶ್ವನಾಥನ ದರ್ಶನ ಪಡೆದರೆ

ಜನ್ಮ ಸಾರ್ಥಕವೆನ್ನುವ ಮಾತುಗಳು ನೆನೆಪಾಗಿ, ನನಗೂ ಈ ಸೌಭಾಗ್ಯ ದೊರಕಿಸಿಕೊಟ್ಟಿದ್ದ ಕಾರಣಕರ್ತರಿಗೆ ಮನಸ್ಸಿನಲ್ಲೇ ಅಭಿವಂದಿಸಿದ್ದೆ. ಗಂಗೆಯಲ್ಲಿ ಮಿಂದು ಪಾವನನಾಗಲು ಸಹಪಾಠಿಗಳೊಂದಿಗೆ ನದಿಯ ಸಮೀಪ ತೆರಳಿದಾಗ ಗೋಚರಿಸಿದ್ದು ಗಂಗೆಯು ಕಲುಷಿತಗೊಂಡು ಕಡುಕಪ್ಪನೆಯ ಬಣ್ಣದ ಗಟಾರದ ನೀರಿನ ಪರಿಸ್ಥಿತಿಯಲ್ಲಿ ಸಾಕಷ್ಟು ಮನುಷ್ಯರ ಅರೆ ಬೆಂದ ಹೆಣಗಳು ಹಾಗೂ ಇನ್ನಿತರ ಪ್ರಾಣಿಗಳ ಶವವನ್ನು ತನ್ನ ಮೇಲ್ಮೈಯಲ್ಲಿ ತೇಲಿಸುತ್ತಿದ್ದ ದೃಶ್ಯ. ವ್ಯಥೆಯೆನಿಸಿ, ಇಲ್ಲಿ ಮಿಂದರೆ ಪುನೀತನಾಗುವುದರ ಬದಲು ಪಾಪಿಯಾಗುವುದಂತೂ ದಿಟವೆನಿಸಿ ಸ್ನಾನ ಮಾಡಲು ಹಿಂಜರಿದೆ. ಆದರೂ ಸ್ನೇಹಿತರ ಬಲವಂತಕ್ಕೆ ಒಲ್ಲದ ಮನಸ್ಸಿನಿಂದ ಗಂಗಾಸ್ನಾನ ಪೂರೈಸಿದ್ದೆ. ಮರಣಶಯ್ಯೆಯಲ್ಲಿದ್ದು, ಈಗಲೋ ಆಗಲೋ ಎಂಬಂತೆ ಪ್ರಾಣಪಕ್ಷಿ ಹಾರಿಹೋಗಲು ಚಡಪಡಿಸುತ್ತಿರುವ ಸನ್ನಿವೇಶವನ್ನು ಎದುರಿಸುತ್ತಿರುವವರ ಬಾಯಿಗೆ ಹಿಂದೂ ಧರ್ಮೀಯರ ಪದ್ಧತಿಯಂತೆ ಕಟ್ಟಕಡೆಗೆ ಬಿಡುವ ನಾನು ಪ್ರತ್ಯಕ್ಷ ಕಂಡ ಗಂಗಾಜಲ ಯಾವುದೇ ಅನುಮಾನವಿಲ್ಲದೆ ಪ್ರಾಣಪಕ್ಷಿ ಹಾರಿಹೋಗಲು ಸಹಾಯ ಮಾಡುವುದೇನೋ ಎನಿಸಿ ಖೇದವೆನಿಸಿತು! ಶೇಷಗಿರಿ, ರಾಮಗೋಪಾಲ ಹಾಗೂ ಮತ್ತೊಬ್ಬ ಸಹಪಾಠಿಯೊಡನೆ ಒಂದು ಆಟೋರಿಕ್ಷಾದ ಮುಖೇನ ಕಾಶೀವಿಶ್ವನಾಥನ ಸನ್ನಿಧಿಗೆ ತೆರಳಿ ನಂತರ ಸಾಧ್ಯವಾದಷ್ಟು ಇನ್ನಿತರ ದೇವಸ್ಥಾನಗಳನ್ನು ಸಂದರ್ಶಿಸಿ ಇಲ್ಲಿನ ವಾಡಿಕೆಯಂತೆ ಬೆಳಗ್ಗಿನ ತಿಂಡಿಗೆ ಇಷ್ಟವಿಲ್ಲದಿದ್ದರೂ ಒಂದಷ್ಟು ಜಿಲೇಬಿ ಜೊತೆಗೆ ಸಮೋಸಗಳನ್ನು ತಿಂದು ಅತಿ ದೊಡ್ಡ ಲೋಟದಲ್ಲಿ ಕೊಟ್ಟಿದ್ದ ಗಟ್ಟಿಯಾದ ಎಮ್ಮೆ ಹಾಲನ್ನು ಹೊಟ್ಟೆ ತುಂಬಾ ಕುಡಿದು ಹರಿದ್ವಾರದ ಕಡೆಗೆ ಹೆಜ್ಜೆ ಹಾಕಿದ್ದೆ.

ಗಂಗಾ ಮಾತೆಯ ವರಪ್ರದಾಯಕವಾದ ಜಳಕವನ್ನು ಅನನ್ಯ ಭಾವದಿಂದ ಸಂಪೂರ್ಣ ಅನುಭವಿಸಿದ್ದು ಹರಿದ್ವಾರದಲ್ಲಿ ಮಿಂದಾಗ! ಪರಿಶುದ್ಧ ನದಿಯ ಅಗಾಧತೆ, ಹರಿಯುವ ರಭಸ ಮತ್ತು ಸೆಳೆತಕ್ಕೆ ಹೆದರಿ ದೃಢ ಮೆಟ್ಟಿಲುಗಳ ಮೂಲಕ ಜಾಗ್ರತೆಯಾಗಿ ನೀರಿನೊಳಕ್ಕೆ ಇಳಿದು ಕೊಚ್ಚಿ ಹೋಗುವುದನ್ನು ತಡೆಯಲು ನಿರ್ಮಿಸಿರುವ ಆಸರೆ ಕಂಭಗಳನ್ನು ಭದ್ರವಾಗಿ ಹಿಡಿದು ನೀರಿನಲ್ಲಿ ಮುಳುಗೆದ್ದಾಗ ಅನಿಸಿದ್ದು– ಗಂಗೆಯು ಬರೀ ಮೈಮೇಲಿನ ಕೊಳೆಯನ್ನಲ್ಲದೆ ಮನಸ್ಸಿನಲ್ಲಿರುವ ಎಲ್ಲಾ ಕಲ್ಮಷವನ್ನೂ ಸಹ ಒಂದಿನಿತೂ ಬಿಡದೆ ತೊಡೆದಳೇನೋ ಎಂಬ ಧನ್ಯತೆಯ ಭಾವನೆ! ಮುಂದುವರೆದ ತದಾತ್ಮ್ಯ ಭಾವದಲ್ಲಿ ತಲ್ಲೀನನಾಗೇ ಇಲ್ಲಿನ ಬೃಹತ್ ಕೈಗಾರಿಕೆಯ ಸಮುಚ್ಚಯಗಳನ್ನು ಹೊಂದಿದ್ದ ಬಿ.ಎಚ್.ಇ.ಎಲ್ ಕಾರ್ಖಾನೆಗೆ ಭೇಟಿ ಇತ್ತು ಅಲ್ಲಿನ ವಿರಾಟ್‌ಸ್ವರೂಪದ ಉತ್ಪಾದನಾ ಕ್ರಮವನ್ನು ಅವಲೋಕಿಸಿ ಅರಗಿಸಿಕೊಳ್ಳಲು ದಣಿದಿದ್ದೆ.

ಪ್ರಯಾಣ ಮುಂದುವರೆಸಿ ದೆಹಲಿ ತಲುಪಿ ಪ್ರೇಕ್ಷಣೀಯ ಸ್ಥಳಗಳಾದ ಕೆಂಪು ಕೋಟೆ, ಕುತುಬ್ ಮಿನಾರ್, ಜಂತರ್ ಮಂತರ್, ಬಿರ್ಲಾ ದೇವಸ್ಥಾನ, ಹಳೇ ದೆಹಲಿ ನಂತರ ಪಾರ್ಲಿಮೆಂಟ್ ಭವನ, ಇಂಡಿಯಾ ಗೇಟ್, ಶಾಂತಿವನ ಮುಂತಾದವುಗಳನ್ನು ವೀಕ್ಷಿಸಿ ನನಗೆ ಅಪರೂಪವೆನಿಸಿದ, ನಮ್ಮಲ್ಲಿನ ಬೀದಿ ಬದಿಯಲ್ಲಿ ಮಾರುವ ವಡೆ, ಚುರುಮುರಿ ಇತ್ಯಾದಿಗಳ ಹಾಗೆ ಅಲ್ಲಿನ ಬೀದಿ ಬದಿಗಳಲ್ಲಿ ಮಾರುತ್ತಿದ್ದ ಬೇಯಿಸಿದ ಮೊಟ್ಟೆಗಳನ್ನು ಉಪ್ಪು ಮೆಣಸಿನೊಂದಿಗೆ ಬಲು ಆಸ್ಥೆಯಿಂದ ತಿಂದು ತೇಗಿದ್ದೆ! ವರ್ಷಕ್ಕೊಮ್ಮೆ ಆಯೋಜಿಸಲಾಗುವ ಇಂಟರ್‌ನ್ಯಾಷನಲ್ ಟ್ರೇಡ್ ಫ಼ೇರ್ ಸಮುಚ್ಚಯಕ್ಕೆ ಭೇಟಿ ಇತ್ತು ಅದರ ಅಗಾಧತೆಯನ್ನು ಕಂಡು ಬೆರಗಾಗಿದ್ದೆ. ನಂತರ ಸಹಪಾಠಿಗಳೊಂದಿಗೆ ನನ್ನ ಪ್ರಯಾಣ ಆಗ್ರಾದೆಡೆಗೆ.

ಮಟಮಟ ಮಧ್ಯಾಹ್ನದ ವೇಳೆಗೆ ತಾಜ್‌ಮಹಲಿನ ಬಳಿಸಾರಿದ್ದೆವು. ಹೊರ ಪ್ರಾಂಗಣದಲ್ಲಿನ ಮುಖ್ಯದ್ವಾರದ ಮೆಟ್ಟಿಲುಗಳನ್ನು ಅತೀ ಕುತೂಹಲದಿಂದ ಆತುರಾತುರವಾಗಿ ಏರುತ್ತಾ ಸಮತಟ್ಟಾದ ತುತ್ತತುದಿಯನ್ನು ತಲುಪಿದಾಗ ಕಂಡದ್ದು ಮುಖ್ಯದ್ವಾರದ ಕಮಾನಿನ ಗಾಢ ನೆರಳಿನ ಚೌಕಟ್ಟಿನ ಹಿಂದೆ ಬಿಸಿಲಿನ ಪ್ರಖರ ಝಳಕ್ಕೆ ಮಿರಮಿರ ಮಿಂಚುತ್ತಿದ್ದ ಹಾಲಿನಂಥಾ ಸಂಪೂರ್ಣ ಬೆಳ್ಳಗಿನ ಅಮೃತಶಿಲೆಯ ತಾಜ್‌ಮಹಲ್ ಕಟ್ಟಡದ ಬೆಡಗಿನ ಭವ್ಯ ದೃಶ್ಯ. ಪ್ರಪ್ರಥಮ ಬಾರಿಗೆ ಗೋಚರಿಸಿದ ಆ ದೃಶ್ಯದ ವಿಜೃಂಭಣೆಗೆ ಸದ್ದು ಗದ್ದಲಗಳೊಂದಿಗೆ ಕೂಡಿದ್ದ ಆ ಪ್ರದೇಶವೆಲ್ಲಾ ಒಂದರೆಕ್ಷಣ ಇಡೀ ಪ್ರಪಂಚವೇ ನಿಶ್ಯಬ್ದವಾಗಿ ಸ್ತಬ್ಧಗೊಂಡಂತೆ ಭಾಸವಾಗಿ ಮೂಕನಾಗಿದ್ದೆ!

ಪ್ರವಾಸದುದ್ದಕ್ಕೂ ನಮ್ಮ ತಂಡವನ್ನು ಮಾರ್ಗದರ್ಶಿಸಲು ಶ್ರೀಯುತ ಮೊಹಮ್ಮದ್ ಅಬ್ಬಾಸ್ ಎಂಬ ಮುಸಲ್ಮಾನ ಪ್ರಾಧ್ಯಾಪಕರು ಜೊತೆಗಿದ್ದ ಕಾರಣಕ್ಕೆ ಭಾರತದಲ್ಲಿನ ಮೆಕ್ಕಾ ಎಂದೇ ಖ್ಯಾತಿಯಾಗಿರುವ ರಾಜಾಸ್ಥಾನದಲ್ಲಿರುವ ಅಜ್ಮೀರ್ ನಗರವನ್ನು ಭೇಟಿ ಮಾಡುವಂತಾಯಿತು. ಅಲ್ಲಿನ ಸೂಫ಼ಿ ಸಂತ ಖ್ವಾಜಾ ಮೊಹಿಯುದ್ದೀನ್ ಚೀಷ್ಠಿ ಯವರ ದರ್ಗಾವನ್ನು ವೀಕ್ಷಿಸಿದ ನಂತರ ತುಸು ದೂರದಲ್ಲಿರುವ ಅಪರೂಪದ ಬ್ರಹ್ಮನ ದೇವಸ್ಥಾನವನ್ನೂ ಸಂದರ್ಶಿಸಿ ಕುಂಬಳಕಾಯಿಯಿಂದ ತಯಾರಿಸುವ ಇಲ್ಲಿನ ವಿಶಿಷ್ಟ ಸಿಹಿ ತಿನಿಸಾದ ಪೇಠಾವನ್ನು ಬಲು ಹುರುಪಿನಿಂದ ಕೊಂಡು ತಿನ್ನಲು ಬಾಯಿಗಿಟ್ಟಾಗಲೇ ಗೊತ್ತಾಗಿದ್ದು, ಆ ತಿನಿಸಿನ ಕಡುಸಿಹಿಯ ರುಚಿಯನ್ನು ಅಷ್ಟು ಸುಲಭದಲ್ಲಿ ಸವಿಯಲಾಗುವುದಿಲ್ಲವೆಂದು! ಕಿವುಚಿದ ಮುಖದೊಂದಿಗೆ ಮುಂಬೈಗೆ ತೆರಳಲು ರೈಲು ನಿಲ್ದಾಣದ ಕಡೆಗೆ ಹೆಜ್ಜೆ ಹಾಕಿದ್ದೆ ಸಹಪಾಠಿಗಳೊಂದಿಗೆ.

ಮುಂಬೈನಲ್ಲಿ ನಾವು ಇಳಿದುಕೊಂಡಿದ್ದ ಜಾಗ ಮಾತುಂಗ. ದೇಶದಾದ್ಯಂತ ಇಲ್ಲಿಯವರೆಗೆ ಸುತ್ತುತ್ತಿದಾಗ ದೊರಕುತ್ತಿದ್ದ ಪ್ರತೀ ನಗರದಲ್ಲಿನ ತನ್ನದೇ ಆದ ವಿಶೇಷ ಸ್ಥಳೀಯ ಆಹಾರಗಳನ್ನು ಸೇವಿಸಿ ಬಂದಮೇಲೆ ಅಪರೂಪಕ್ಕೆ ಕಂಡುಬಂದ ಉಡುಪಿ ಬ್ರಾಹ್ಮಣರ ಫಲಹಾರ ಮಂದಿರದಲ್ಲಿ ಗರಿಗರಿಯಾದ ಮಸಾಲೆ ದೋಸೆಯನ್ನು ಮುಂಬೈವಾಸಿಗಳ ಶೈಲಿಯಲ್ಲಿ ಚಮಚ ಮತ್ತು ಮುಳ್ಳುಕಡ್ಡಿಯನ್ನು ಉಪಯೋಗಿಸಿ ತಿನ್ನುವಾಗ ಆದ ಮುಜುಗರದೊಂದಿಗಿನ ಆನಂದಕ್ಕೆ ಎಲ್ಲೆ ಇರಲಿಲ್ಲ!

ಮುಂಬೈನ ಪ್ರೇಕ್ಷಣೀಯ ಸ್ಥಳಗಳಾದ ಗೇಟ್‌ವೇ ಆಫ್ ಇಂಡಿಯಾ, ತಾಜ್ ಹೋಟೆಲ್, ಎಲಿಫೆಂಟಾ ದ್ವೀಪದಲ್ಲಿನ ಗುಹಾಲಯ, ನಾರೀಮನ್ ಪಾಯಿಂಟ್, ಮೆರಿನ್ ಡ್ರೈವ್‌ನೊಂದಿಗೆ ಇಲ್ಲಿನ ವಿಮಾನ ನಿಲ್ದಾಣವನ್ನೂ ಸಹ ಭೇಟಿ ಮಾಡಿದ್ದೆ.

ಧಾರಾವಿ ಕೊಳಚೆಪ್ರದೇಶದ ಅಗಾಧತೆಗೆ ಬೆಚ್ಚಿ ಬೀಳುವುದೊಂದೇ ಬಾಕಿ ಇತ್ತು! ತರುವಾಯ ಸಿನೆಮಾ ಗೀಳಿನ ಪ್ರಯುಕ್ತ ಆಗತಾನೇ ಬಿಡುಗಡೆಯಾಗಿದ್ದ ಆಕ್ಟೋಪುಸ್ಸಿ ಎಂಬ ಜೇಮ್ಸ್ ಬಾಂಡ್ ಚಲನಚಿತ್ರವನ್ನು ಕೆಲ ಸಹಪಾಠಿಗಳೊಂದಿಗೆ ವೀಕ್ಷಿಸಿದ್ದೆ.

ಜುಹೂ ಸಮುದ್ರ ತೀರದಲ್ಲಿನ ಕಡುಗಪ್ಪನೆಯ ಸಾಗರವನ್ನು ಕಂಡು ನೀರಿಗಿಳಿಯಲು ಮನಸ್ಸೊಪ್ಪದೇ ದೂರದಿಂದಲೇ ವೀಕ್ಷಿಸಿ ಅಲ್ಲಿನ ವಿಶೇಷ ತಿಂಡಿಗಳಾದ ಭೇಲ್ ಮತ್ತು ಪಾವ್‌ಭಾಜಿಯ ರುಚಿಯನ್ನು ಸವಿಯುತ್ತಾ ದಿಗಂತದಲ್ಲಿ ಸಾವಕಾಶವಾಗಿ ಸಮುದ್ರದೊಳಕ್ಕೆ ಮಳ್ಳನಂತೆ ಜಾರುತ್ತಿದ್ದ ರಕ್ತಸಿಕ್ತ ರವಿಯನ್ನು ಕಂಡು ಅನಿಸಿದ್ದು;

ಈತನ ರಕ್ತದಾಹಕ್ಕೆ ಕೊನೆಯೇ ಇಲ್ಲವೇನೋ ಕಾರಣ ಅನವರತ ಗೋಧೂಳಿಯ ಹೊತ್ತಿಗೆ ಪೃಥ್ವಿಯ ಅದೆಷ್ಟು ಜೀವಿಗಳ ನೆತ್ತರು ಹೀರಿ ಯಾವುದೇ ಮುಲಾಜಿಲ್ಲದೇ ಯಾರಕೈಗೂ ಸಿಗದೆ ಎಲ್ಲರ ಸಮ್ಮುಖದಲ್ಲಿ ಧೈರ್ಯವಾಗಿ ಅಂತರ್ಧಾನನಾಗುವ ಕೌಶಲ್ಯಕ್ಕೆ ಎಲ್ಲರೂ ತಲೆ ಬಾಗಲೇಬೇಕೆಂದು!

ಮುಂಬೈನ ಪ್ರಖ್ಯಾತ ಸಾರಿಗೆಯಾದ ಲೋಕಲ್ ರೈಲ್‌ನ ಪ್ರಯಾಣದ ಅನುಭವ ಪಡೆಯಲು ಕೆಲವೆಡೆಗಳಲ್ಲಿ ಬಳಸುವಾಗ, ಇಳಿಯಬೇಕಾದ ನಿರ್ದಿಷ್ಟ ನಿಲ್ದಾಣದಲ್ಲಿ ಇಳಿಯಲಾಗದೆ ತಂಡದಿಂದ ಬೇರ್ಪಟ್ಟು ಪೇಚಿಗೆ ಸಿಲುಕಿದ ಪ್ರಸಂಗಗಳಲ್ಲಿ ನಿಲ್ದಾಣದಲ್ಲಿನ ಜನಜಂಗುಳಿಯ ಅಗಾಧತೆಗೆ ಹೆದರಿ ಕಳೆದುಹೋಗುವೆನೇನೋ ಎಂದು ಭಯವಾಗುತ್ತಿತ್ತು.

ಪ್ರವಾಸ ಮುಂದುವರೆದು ಹೈದರಾಬಾದ್ ತಲುಪಿದ್ದೆ. ಇಲ್ಲಿನ ವಿಶೇಷ ಅಡುಗೆಯಾದ ಹೈದರಾಬಾದ್ ಬಿರಿಯಾನಿಯ ರುಚಿಯನ್ನು ಮೆಲುಕು ಹಾಕುತ್ತಾ ಪ್ರೇಕ್ಷಣೀಯ ಸ್ಥಳಗಳಾದ ಚಾರ್‌ಮಿನಾರ್, ಹುಸೇನ್ ಸಾಗರ್ ಕೊಳ, ಬಿರ್ಲಾ ಮಂದಿರ, ಬೃಹತ್ತಾದ ಸಾಲಾರ್‌ಜಂಗ್ ಮ್ಯೂಸಿಯಂ ಮತ್ತು ಗೋಲ್ಕೊಂಡ ಫೋರ್ಟ್‌ನಲ್ಲಿ ನಿಜಾಮರ ಆಳ್ವಿಕೆಯ ಕಾಲದಲ್ಲಿನ ವೈಭವ, ರೀತಿ ರಿವಾಜುಗಳ ಮಾಹಿತಿಯನ್ನು ಗ್ರಹಿಸುತ್ತಾ ಮೈದಣಿಯೇ ಅಡ್ಡಾಡಿ ಅಲ್ಲಿನ ವಿಶೇಷತೆಯಾದ ಶಬ್ದ ತರಂಗಗಳ ಮೇಲಿನ ಹತೋಟಿಯನ್ನು ಸಾಬೀತುಗೊಳಿಸುವ ಚಮತ್ಕಾರವೇನೋ ಎಂಬಂತೆ ಬೆಟ್ಟದ ತುತ್ತ ತುದಿಯಲ್ಲಿನ ಬತೇರಿಯಲ್ಲಿ ಮಾಡಿದ ಶಬ್ದ ಕೆಳಗಿನ ಅಂತಸ್ತಿನಲ್ಲಿರುವ ಕೋಣೆಗಳಲ್ಲಿ ಮಾರ್ದನಿಸುವ ವೈಖರಿಗೆ ಮಾರುಹೋಗಿದ್ದೆ.

ಮುಂದೆ ಬೆಂಗಳೂರು ತಲುಪಿ ಇಲ್ಲಿನ ವಿಶ್ವೇಶ್ವರಯ್ಯ ಕೈಗಾರಿಕಾ ಮತ್ತು ತಾಂತ್ರಿಕತೆಯ ಮ್ಯೂಸಿಯಂ ಮತ್ತು ವೆಂಕಟಪ್ಪ ಚಿತ್ರ ಕಲಾ ಪರಿಷತ್ತನ್ನು ಸಂದರ್ಶಿಸಿ ಅದೇ ದಿನ ರಾತ್ರಿ ಎರಡನೇ ಆಟಕ್ಕೆ ಅಭಿನಯ್ ಚಲನಚಿತ್ರಮಂದಿರದಲ್ಲಿನ ಚಲಿಸುವ ಸೋಪಾನಗಳ ಮೇಲೆ ಆಯತಪ್ಪದೆ ನಿಂತು ಸವಾರಿ ಮಾಡಲು ತಿಣುಕಿ, ಎಸ್ಪ್ರೆಸ್ಸೋ ಕಾಫಿಯ ರುಚಿ ಸವಿದು ರಜ಼ಿಯಾ ಸುಲ್ತಾನ್ ಎಂಬ ಹೇಮಾಮಾಲಿನಿ ಹಾಗೂ ಧರ್ಮೇಂದ್ರ ನಟಿಸಿದ್ದ ಹಿಂದಿ ಚಲನಚಿತ್ರ ವೀಕ್ಷಿಸಿ ಮಾರನೇ ದಿನ ಮೈಸೂರಿನ ದಾರಿ ಹಿಡಿದಿದ್ದೆ.

ಇಡೀ ಪ್ರವಾಸದುದ್ದಕ್ಕೂ, ಶೇಷಗಿರಿಯು ತನ್ನೊಡನೆ ತಂದಿದ್ದ ಆಗ್ಫಾ ಕ್ಲಿಕ್– ೩ ಎನ್ನುವ, ಹದಿನಾರು ಕಪ್ಪು–ಬಿಳುಪು ಭಾವಚಿತ್ರವನ್ನಷ್ಟೇ ತೆಗೆಯಲು ಸಾಧ್ಯವಿದ್ದ ಫಿಲ್ಮ್ ಅನ್ನು ಅಡಕಗೊಳಿಸಿಕೊಳ್ಳುವ ಸ್ಥಿರಚಿತ್ರಣ ಗ್ರಾಹಕದೊಂದಿಗೆ ಯಾವ ದೃಶ್ಯವನ್ನು ಸೆರೆ ಹಿಡಿಯಬೇಕೆಂದು ಕೂಲಂಕಷವಾಗಿ ಪರಾಂಬರಿಸಿದ ನಂತರವೇ ದೃಶ್ಯವನ್ನು ಸೆರೆಹಿಡಿಯುತ್ತಿದ್ದದ್ದು.

ಆದರೂ ಹಲವು ಪ್ರೇಕ್ಷಣೀಯ ಸ್ಥಳಗಳಲ್ಲಿ, ಹೋದ ದಾರಿಯಲ್ಲೇ ಹಿಂದಿರುಗಿ ಬರುವೆವೆಂದುಕೊಂಡು ವಾಪಸ್ ಬರುವಾಗ ದೃಶ್ಯವನ್ನು ಸೆರೆ ಹಿಡಿಯಲು ನಿರ್ಧರಿಸಿ, ಮುಂದೆ ಬಂದ ಮಾರ್ಗದಲ್ಲಿ ವಾಪಸ್ ಆಗದೆ ಬೇರೆಯದೇ ಹಾದಿಯಲ್ಲಿ ಹೊರ ಬಂದಾಗ ನಮಗಾಗುತ್ತಿದ್ದ ಕಸಿವಿಸಿಗೆ ಎಣೆ ಇರಲಿಲ್ಲ!

ಶೇಷಗಿರಿಗೆ ಛಾಯಾಗ್ರಹಣದ ಬಗ್ಗೆ ವಿಶೇಷ ಅಭಿರುಚಿಯಿದ್ದು ಅದರಲ್ಲಿ ಪ್ರಯೋಗಗಳನ್ನು ಮಾಡಲು ಉತ್ಸುಕನಾಗಿದ್ದು ತಾನು ಸೆರೆ ಹಿಡಿಯುತ್ತಿದ್ದ ಪ್ರತಿಯೊಂದು ದೃಶ್ಯದೊಳಗೆ ನನ್ನನ್ನು ಯಾವಾಗಲೂ ಅಡಕಗೊಳಿಸುತ್ತಿದ್ದ! ಸೆರೆ

ಹಿಡಿದ ಭಾವಚಿತ್ರಗಳು ಹೇಗೆ ಹೊರಹೊಮ್ಮಿವೆಯೋ ಎಂಬ ಅತೀವ ಕುತೂಹಲ ತಡೆಯಲಾಗದೆ ಸಾಧ್ಯವಾದಲ್ಲೆಲ್ಲಾ ಫಿಲ್ಮ್ ಅನ್ನು ಸ್ಟುಡಿಯೋದಲ್ಲಿ ಸಂಸ್ಕರಿಸಿ ಬಂದ ಫಲಿತಾಂಶ ಅವಲೋಕಿಸಿ ಹಿರಿಹಿರಿ ಹಿಗ್ಗುತ್ತಿದ್ದೆವು.

ಇಷ್ಟೆಲ್ಲಾ ಸುಂದರ ಅವಿಸ್ಮರಣೀಯ ಪ್ರವಾಸದ ಅನುಭವಕ್ಕೆ ಕಪ್ಪು ಚುಕ್ಕೆ ಇಟ್ಟಂತೆ ರೈಲಿನ ಪ್ರಯಾಣದುದ್ದಕ್ಕೂ ಪ್ರಯಾಣಿಸಲು ನಮಗೆ ದೊರಕುತ್ತಿದ್ದ ಸ್ಥಳ ಯಾವಾಗಲೂ ಶೌಚಾಲಯದ ಸಮೀಪದಲ್ಲೇ! ಹತ್ತೊಂಭತ್ತು ದಿನಗಳ ಸುದೀರ್ಘ ರೈಲು ಪ್ರಯಾಣಕ್ಕೆ ಹೊಂದಿಕೊಂಡಿದ್ದ ದೇಹ ಮುಂದಿನ ಕೆಲವು ವಾರಗಳು ನಿದ್ರೆಯ ಮಂಪರಿನಲ್ಲಿದ್ದಾಗಲೆಲ್ಲಾ ರೈಲಿನ ಕುಲುಕಾಟದ ಅನುಭವದ ಭ್ರಮೆಯಾಗುತ್ತಿತ್ತು.



# ಅಧ್ಯಾಯ ೪

## ಉದ್ಯೋಗ ಪರ್ವ

ವ್ಯಾಸಂಗ ಮುಗಿಯುತ್ತಿದ್ದ ಹಾಗೆ ಕಂಡ ಕಂಡ ಕಡೆಗೆಲ್ಲಾ ಅರ್ಜಿ ಹಾಕಿದ್ದಾಯಿತು. ಆದರೆ ಎಲ್ಲಿಂದಲೂ ಉತ್ತರವಿಲ್ಲ. ರಾಮಗೋಪಾಲನು ವಿದ್ಯಾವರ್ಧಕ ಶಿಕ್ಷಣ ಸಂಸ್ಥೆಯ ಐ.ಟಿ.ಐ.ನಲ್ಲಿ ಅಧ್ಯಾಪಕನ ಹುದ್ದೆಗೆ ಸೇರಿದ್ದ, ಶೇಷಗಿರಿಗೆ ಎನ್.ಐ.ಇ. ಸಂಸ್ಥೆಯ ವಿದ್ಯುತ್ ಪ್ರಯೋಗಾಲಯದಲ್ಲಿ ಹಂಗಾಮಿ ಬೋಧನಾರಹಿತ ಉಪಾಧ್ಯಾಯನ ಉದ್ಯೋಗ ದೊರಕಿತ್ತು. ಯಾರದೋ ಮುಖಾಂತರ ನನಗೆ ಆಗ್ಗೆ ಮೈಸೂರಿನಲ್ಲಿದ್ದ ಹೆಸರಾಂತ ವಿದ್ಯುತ್ ಗುತ್ತಿಗೆದಾರರಲ್ಲಿ ಒಬ್ಬರಾದ ಎಸ್.ಎಸ್.ಇಂಜಿನಿಯರ್ಸ್ ಎಂಬುವರಲ್ಲಿ ಕೆಲಸ ಸಿಕ್ಕಿತ್ತು. ಮೊದಲಿಗೆ ನಂಜನಗೂಡಿನಲ್ಲಿರುವ ಸುಜಾತ ಟೆಕ್ಸ್‌ಟೈಲ್ಸ್ ಹಾಗೂ ಮೇಟಗಳ್ಳಿಯಲ್ಲಿರುವ ವಿಕ್ರಾಂತ್ ಟೈಯರ್ಸ್ ಕಾರ್ಖಾನೆಯಲ್ಲಿನ ವಿದ್ಯುತ್ ನಿರ್ವಹಣೆ ಮಾಡುತ್ತಿದ್ದ ತಂಡದ ಕೆಲಸದ ಪ್ರಗತಿ ಹಾಗೂ ಅಲ್ಲಿನ ಕೆಲಸದನುಗುಣವಾದ ಬೇಡಿಕೆಗಳ ವರದಿ ಮಾಡುವ ಜವಾಬ್ದಾರಿ ವಹಿಸಿದ್ದರು. ನಂಜನಗೂಡಿಗೆ ರೈಲಿನಲ್ಲಿ ಹೋಗಿ ಬರಲು ಅವಕಾಶವಿತ್ತು, ಮೇಟಗಳ್ಳಿಗೆ ಹೋಗಲು ಕಂಪೆನಿಯ ಸೈಕಲ್ ಉಪಯೋಗಿಸಬೇಕಿತ್ತು.

ಒಂದು ತಿಂಗಳಾದ ಮೇಲೆ, ಕೆ.ಆರ್. ಪೇಟೆಯ ಹತ್ತಿರವಿರುವ ಯಲದಹಳ್ಳಿ ಎಂಬಲ್ಲಿಗೆ ನನ್ನನ್ನು ವರ್ಗಾಯಿಸಿದರು. ಗ್ರಾಮೀಣ ವಿದ್ಯುದ್ದೀಕರಣ ಎಂಬ ಸರ್ಕಾರಿ ಯೋಜನೆಯಿಂದಾಗಿ ಕೆಲವೊಂದು ಹಳ್ಳಿಗಳು ಇವರ ಪಾಲಾಗಿದ್ದವು, ಅಂತಹವುಗಳಲ್ಲಿ ಯಲದಹಳ್ಳಿಯೂ ಒಂದು. ಕೆ.ಆರ್. ಪೇಟೆಯಿಂದ ಕಿಕ್ಕೇರಿಯ ವರೆಗೆ ತಲುಪಲು ಯಾವುದಾದರೂ ವಾಹನ ಸೌಲಭ್ಯವಿತ್ತು. ಕಿಕ್ಕೇರಿಯಿಂದ ಯಲದಹಳ್ಳಿಗೆ ಕಾಲ್ನಡಿಗೆ ಅಥವ ಎತ್ತಿನ ಗಾಡಿ ಮುಖೇನ ತಲುಪಬೇಕಿತ್ತು. ಕಂಪೆನಿಯ ವತಿಯಿಂದ ನನ್ನನ್ನೂ ಸೇರಿ ಹದಿನಾರು ಜನರ ತಂಡವನ್ನು ನೇಮಕ ಮಾಡಲಾಗಿತ್ತು. ನಮ್ಮೆಲ್ಲರನ್ನು ಆ

ಹಳ್ಳಿಯ ಗೌಡರಿಗೆ ಪರಿಚಯಿಸಿ, ನನ್ನ ನೇತೃತ್ವದಲ್ಲಿ ಇಲ್ಲಿನ ಕೆಲಸ ಸಾಗುತ್ತದೆ, ಈ ತಂಡಕ್ಕೆ ನಿಮ್ಮ ಸಹಕಾರ ಬಹಳ ಅತ್ಯಗತ್ಯ ಎಂದು ಮನವಿ ಮಾಡಿ ಕಂಪೆನಿಯವರು ಹೊರಟರು. ನಮ್ಮ ವಾಸ್ತವ್ಯ ಆ ಹಳ್ಳಿಯ ಗೌಡರ ಮನೆಯಲ್ಲಿ. ಹದಿನಾರು ಜನಕ್ಕೆ ವಾರಕ್ಕಾಗುವಷ್ಟು ದಿನಸಿಯನ್ನು ಹಾಗೂ ತರಕಾರಿ ಮುಂತಾದವುಗಳಿಗೆ ಒಂದಷ್ಟು ಹಣವನ್ನೂ ಕಂಪೆನಿ ವತಿಯಿಂದ ಗೌಡರ ಮನೆಯವರಿಗೆ ವಾರಕ್ಕೊಮ್ಮೆ ಕೊಡಲಾಗುತ್ತಿತ್ತು. ನಮ್ಮ ತಂಡದ ಶ್ರಮದಿಂದ ಅವರ ಹಳ್ಳಿಗೆ ವಿದ್ಯುತ್ ಬರುವುದೆಂದು, ವಿಶಾಲ ಹೃದಯದಿಂದ ನಾವು ತಂಗಲು ಬಾಡಿಗೆ ಹಾಗೂ ನಮಗೆ ಎರಡು ಹೊತ್ತು ಅಡುಗೆ ಮಾಡಿ ಬಡಿಸಲು ಗೌಡರ ಮನೆಯವರು ಏನನ್ನೂ ಅಪೇಕ್ಷಿಸಿರಲಿಲ್ಲ. ನಮ್ಮನ್ನೆಲ್ಲಾ ಸ್ವಂತದವರೇನೋ ಎಂಬಂತೆ ಆದರಿಸುತ್ತಿದ್ದರು.

ನಮ್ಮ ತಂಡದ ಜವಾಬ್ದಾರಿ, ಹಳ್ಳಿಯ ಸಮೀಪದಲ್ಲಿ ಹಾದು ಹೋಗಿದ್ದ ಎಚ್.ಟಿ ವಿದ್ಯುತ್ ಲೈನ್‌ನಿಂದ ಹಳ್ಳಿಯ ಹೊರ ವಲಯದ ತನಕ ಕಂಬಗಳನ್ನು ನೆಟ್ಟು ವಿದ್ಯುತ್ ತಂತಿ ಎಳೆದು, ಹೊರವಲಯದಲ್ಲಿ ಟ್ರಾನ್ಸ್‌ಫಾರ್ಮರ್ ಅನ್ನು ಸ್ಥಾಪಿಸಿ ಅಲ್ಲಿಂದ ಇಡೀ ಹಳ್ಳಿಗೆ ಎಲ್.ಟಿ ವಿದ್ಯುತ್ ಲೈನ್‌ಗೋಸ್ಕರ ಕಂಬಗಳನ್ನು ನೆಟ್ಟು ವಿದ್ಯುತ್ ತಂತಿ ಎಳೆದು, ನಿಗದಿತ ಜಾಗಗಳಲ್ಲಿ ಬೀದಿ ದೀಪಗಳನ್ನು ಅಳವಡಿಸಿ, ನಂತರ ಪ್ರತಿಯೊಂದು ಮನೆಗೆ ತಲಾ ಒಂದೊಂದು ವಿದ್ಯುತ್ ದೀಪವನ್ನು ಹಾಕಬೇಕಿತ್ತು.

ಬೆಳಿಗ್ಗೆ ಐದು ಘಂಟೆಗೆ ಎದ್ದು ನಿತ್ಯಕರ್ಮಗಳನ್ನು ಪೂರೈಸಿ ಗೌಡರ ಮನೆಯ ಹೆಂಗಸರು ಬಡಿಸುವ ತಿಂಡಿಯನ್ನು ಗಡದ್ದಾಗಿ ತಿಂದು, ಮಧ್ಯಾಹ್ನಕ್ಕೆಂದು ಒಂದಷ್ಟು ಬುತ್ತಿ ಕಟ್ಟಿಕೊಂಡು, ಬಿಂದಿಗೆಗಳಲ್ಲಿ ಕುಡಿಯಲು ನೀರು ತುಂಬಿಸಿಕೊಂಡು, ಕೆಲಸಕ್ಕೆ ಬೇಕಾದ ಸಾಮಾನು ಸರಂಜಾಮುಗಳನ್ನೆಲ್ಲಾ ಕೈ ಗಾಡಿಯಲ್ಲಿ ಹೇರಿಕೊಂಡು ಕೆಲಸದ ಜಾಗಕ್ಕೆ ಸೇರಿ ಕೆಲಸ ಮುಗಿಸಿ ವಾಪಸ್ ಬರುವಷ್ಟರಲ್ಲಿ ಸಂಜೆ ಏಳಾಗಿರುತ್ತಿತ್ತು. ಬಂದ ಕೂಡಲೇ ಕೈ, ಕಾಲು ಮುಖ ತೊಳೆದು ಊಟ ಮುಗಿಸಿ ನಾಳಿನ ಕೆಲಸದ ಬಗ್ಗೆ ಚರ್ಚಿಸಿ ಮಲಗಿದರೆ ಎಚ್ಚರ ಮತ್ತೆ ನಾಳೆ ಬೆಳಿಗ್ಗೆಯೇ! ಕೆಲಸ ಜರುಗುತ್ತಿದ್ದ ಜಾಗಕ್ಕೆ ಹೋಗುವ ಮುನ್ನ ಎರಡೆರಡು ಸಾರಿ ಪರೀಕ್ಷಿಸಿ ಎಲ್ಲಾ ವಸ್ತುಗಳಿವೆಯೇ ಎಂದು ಖಚಿತವಾದ ಮೇಲಷ್ಟೇ ಹೊರಡುತ್ತಿದ್ದದ್ದು, ಯಾಕೆಂದರೆ ಏನಾದರು ಮರೆತರೆ ಮತ್ತೆ ವಾಪಸ್ ಬಂದು ಒಯ್ಯಲು ಬಹು ಸಮಯ ನಷ್ಟವಾಗುತ್ತಿತ್ತು. ನಮ್ಮ ತಂಡದವರ ಶ್ರದ್ಧೆಯ ಕಾರ್ಯವೈಖರಿಯಂತೂ ತುಂಬಾ ಚೆನ್ನಾಗಿತ್ತು. ಅತೀ ಕಡಿಮೆ ಸಲಕರಣೆಗಳೊಂದಿಗೆ ಎಲ್ಲಾ ಕೆಲಸವನ್ನು ಅಚ್ಚುಕಟ್ಟಾಗಿ ಮಾಡಿ ಪೂರೈಸುತ್ತಿದ್ದರು. ಅವರಿಂದ ನಾನು ಕಲಿತದ್ದು ಬಹಳ ಮಹತ್ತರವಾದದ್ದು! ಎರಡು

ವಾರಕ್ಕೊ ಮೂರು ವಾರಕ್ಕೊ ಒಮ್ಮೆ ಮೈಸೂರಿಗೆ ವಾಪಸ್ ಬಂದು ಒಂದೆರಡು ದಿನ ಇದ್ದು ಮತ್ತೆ ಯಲದಹಳ್ಳಿಗೆ ಹೋಗುತ್ತಿದ್ದೆ. ವಾಪಸ್ ಹೋಗುವಾಗಲೆಲ್ಲಾ ಎರಡು ಕವಳಿಗೆ ಮೈಸೂರಿನ ಬಿಳಿ ಚಿಗುರೆಲೆಯನ್ನು ಗೌಡರ ತಾಯಿಯವರ ಅಪೇಕ್ಷೆಯ ಮೇರೆಗೆ ಮರೆಯದೇ ಕೊಂಡೊಯ್ಯುತ್ತಿದ್ದೆ.

ಗೌಡರ ಮಗನ ಜೊತೆ ಕೆಲ ಶನಿವಾರ ರಾತ್ರಿ ಹತ್ತಿರದಲ್ಲಿನ ಶ್ರವಣಬೆಳಗೊಳಕ್ಕೆ ತೆರಳಿ ಯಾವುದಾದರು ಚಲನಚಿತ್ರ ವೀಕ್ಷಿಸಿ ಅವರ ನೆಂಟರ ಮನೆಯಲ್ಲಿ ರಾತ್ರಿ ತಂಗಿದ್ದು ಭಾನುವಾರ ಊರೆಲ್ಲಾ ಸುತ್ತಿ ವಾಪಸ್ಸಾಗುತ್ತಿದ್ದೆ. ಎಲ್ಲಾ ಕಾರ್ಯಗಳು ಸುಸೂತ್ರವಾಗಿ ಸಾಗಿತ್ತು, ಆದರೆ...

ಒಂದು ಸಂಜೆ ನಾವೆಲ್ಲಾ ಅಂದಿನ ಕೆಲಸ ಮುಗಿಸಿ ವಾಪಸ್ ಗೌಡರ ಮನೆಗೆ ಬರುತ್ತಿದ್ದ ಹಾಗೇ ಜಗುಲಿಯ ಮೇಲೆ ಕುಳಿತ್ತಿದ್ದ ಗೌಡರು ಜೋರಾಗಿ ಆರ್ಭಟಿಸತೊಡಗಿದರು, ನನಗೋ ಏಕೆಂದು ಅರ್ಥವಾಗಲಿಲ್ಲ. ಗೌಡರಿಗೆ ಶಾಂತವಾಗಲು ಹೇಳಿ ವಿಷಯವೇನೆಂದೆ? ಅವರೋ ಶಾಂತವಾಗುವುದಿರಲಿ ಇನ್ನಷ್ಟು ಎತ್ತರದ ದನಿಯಲ್ಲಿ ಕೂಗಿದರು. ನಮ್ಮ ಹಟ್ಟಿಯೆಲ್ಲಾ ಮೈಲಿಗೆಯಿಂದ ಹಾಳಾಗಿ ಹೋಯ್ತು ಮುಂದುವರೆದು ಅವಾಚ್ಯ ಶಬ್ದಗಳನ್ನು ಬಳಸಿ ಬಯ್ಯತೊಡಗಿದರು. ವಿಷಯವೇನೆಂದರೆ, ಹದಿನಾರು ಜನರ ನಮ್ಮ ತಂಡದಲ್ಲಿ ಒಬ್ಬ ಕೀಳು ಜಾತಿಯವನಾಗಿದ್ದ! ನಮ್ಮನ್ನೆಲ್ಲಾ ಸಾರಾ ಸಗಟಾಗಿ ಮನೆಯಿಂದ ಹೊರ ಹಾಕಿ ನನಗೆ ಆದೇಶಿಸಿದರು "ಕೂಡಲೇ ಕರೆಯಿರಿ ನಿಮ್ಮ ಕಂಪೆನಿಯವರನ್ನು". ಸರಿ, ಎದ್ದೆನೋ ಬಿದ್ದೆನೋ ಎಂಬಂತೆ ಆ ರಾತ್ರಿಯಲ್ಲಿ ಇಬ್ಬರು ಸಹೋದ್ಯೋಗಿಗಳೊಂದಿಗೆ ನಡೆದುಕೊಂಡು ಕಿಕ್ಕೇರಿ ತಲುಪಿ ಅಲ್ಲಿಂದ ಆಟೋ ಹಿಡಿದು ಕೆ.ಅರ್. ಪೇಟೆ ತಲುಪಿ ಕಂಪೆನಿಯವರಿಗೆ ದೂರವಾಣಿ ಮೂಲಕ ಪರಿಸ್ಥಿತಿ ವಿವರಿಸಿದೆ. ಅವರು ಎರಡು ದಿನ ಸಂಬಾಳಿಸು, ಬರುತ್ತೇವೆ ಎಂದರು. ಆ ಎರಡು ದಿನಗಳು ನಮ್ಮ ಪಾಡಂತೂ ನಾಯಿ ಪಾಡು, ಹಳ್ಳಿಯವರೆಲ್ಲಾ ನಮ್ಮನ್ನು ಶತ್ರುಗಳಂತೆ ಕಾಣುತ್ತಿದ್ದರು. ಗೌಡರ ಮನೆಯವರು ಒಂದಷ್ಟು ಪಾತ್ರೆಗಳನ್ನು ಕೊಟ್ಟು ನಿಮ್ಮ ಪಾಡು ನಿಮಗೆ ಎಂದರಲ್ಲದೆ ಊರಿನಾಚೆ ಇರಲು ಒಂದು ಮನೆಯನ್ನು ಬಿಟ್ಟು ಕೊಟ್ಟಿದ್ದರು. ಅಲ್ಲೇ ನಮ್ಮ ತಂಡದವರೆಲ್ಲಾ ಒಟ್ಟಿಗೆ ಇದ್ದು ಅಡುಗೆ ಮಾಡಿಕೊಂಡು ಕೆಲಸ ಮುಂದುವರೆಸುತ್ತಾ ಕಂಪೆನಿಯವರು ಬರುವುದನ್ನೇ ಎದುರು ನೋಡುತ್ತಿದ್ದೆವು.

ಕಂಪೆನಿಯವರು ಹಾಗು ಗೌಡರೊಡನೆ ಮಾತುಕತೆಯಾಗಿ ಕಡೆಗೆ ಆ ಕೀಳು ಜಾತಿಯವನನ್ನು ತಂಡದಿಂದ ತೆಗೆದರೆ ಮತ್ತೆ ಮೊದಲಿನಂತೆ ಇದ್ದು ಮುಂದುವರೆಯಬಹುದೆಂದರು. ದುರದೃಷ್ಟಕ್ಕೆ ನಮ್ಮ ತಂಡದಲ್ಲಿದ್ದ ಅತ್ಯಂತ ನುರಿತ

ಕೆಲಸಗಾರನೆಂದರೆ ಆತನೇ! ಪರಿಸ್ಥಿತಿಯನ್ನು ಗೌಡರಿಗೆ ವಿವರಿಸಿದ ಮೇಲೆ ಅವನೊಬ್ಬನನ್ನು ಬಿಟ್ಟು ಮಿಕ್ಕವರಿಗೆ ಮೊದಲಿನಂತೆ ತಮ್ಮ ಮನೆಯಲ್ಲಿ ಇರಲು ಒಪ್ಪಿದರು. ಆತನಿಗೆ ಮಾತ್ರ ಇರಲು ಪಕ್ಕದ ಬೀದಿಯಲ್ಲಿನ ಒಂದು ಚಿಕ್ಕ ಕೋಣೆಯನ್ನು ಕೊಟ್ಟರಲ್ಲದೆ, ಅವನ ಊಟ ತಿಂಡಿ ಎಲ್ಲ ಗೌಡರ ಮನೆಯ ಹೊರಗಿನ ಬೀದಿಯ ಜಗುಲಿಯಲ್ಲಿ! ಆತನ ಸ್ಥಿತಿ ಕಂಡು ನನಗೆ ಅನುಕಂಪವೆನಿಸಿದರೂ ನಾನೇನೂ ಮಾಡುವಂತಿರಲಿಲ್ಲ.

ಎರಡುವರೆ ತಿಂಗಳಲ್ಲಿ ಯಲದಹಳ್ಳಿಯಲ್ಲಿನ ವಿದ್ಯುದ್ದೀಕರಣದ ಕೆಲಸ ಮುಗಿದು ನನ್ನನ್ನು ಬೆಳವಾಡಿಯ ಕೈಗಾರಿಕಾ ವಲಯದಲ್ಲಿರುವ ಕಿರ್ಲೋಸ್ಕರ್ ಎಲೆಕ್ಟ್ರಿಕ್ ಕಾರ್ಖಾನೆಯ ನೂತನ ಕಟ್ಟಡವಾದ ಎಲೆಕ್ಟ್ರಾನಿಕ್ಸ್ ಬಿಲ್ಡಿಂಗ್ ಹಾಗೂ ರೆಕಾನ್ ಮೆಷಿನ್ ಟೂಲ್ಸ್ ಎಂಬ ಕಾರ್ಖಾನೆಗಳ ವಿದ್ಯುದ್ದೀಕರಣ ನಡೆಸುತ್ತಿದ್ದ ತಂಡಗಳ ಉಸ್ತುವಾರಿಗೆ ನೇಮಿಸಿದರು. ರೆಕಾನ್ ಮೆಷಿನ್ ಟೂಲ್ಸ್ ಕಾರ್ಖಾನೆಯ ವಿದ್ಯುದ್ದೀಕರಣದ ಸಮಯದಲ್ಲಿನ ಎಲ್ಲಾ ಹಂತಗಳಲ್ಲಿ ಭಾಗವಹಿಸುವ ಸದವಕಾಶ ಒದಗಿ ನನ್ನ ಅನುಭವಕ್ಕೆ ಮೆರುಗು ಬಂದಿತ್ತು. ಕಿರ್ಲೋಸ್ಕರ್‌ನಲ್ಲಿ ನಡೆಯುತ್ತಿದ್ದದ್ದು ತೇಪೆ ಕೆಲಸ, ನೂತನ ಕಟ್ಟಡ ಕಟ್ಟುವ ಆರಂಭದಲ್ಲಿದ್ದ ವಿದ್ಯುತ್ ಗುತ್ತಿಗೆದಾರರಿಗೂ ಮತ್ತು ಕಟ್ಟಡದ ಗುತ್ತಿಗೆದಾರರಿಗೂ ಮನಸ್ತಾಪ ಉಂಟಾಗಿ ವಿದ್ಯುತ್ ಕೆಲಸ ಅರ್ಧಕ್ಕೇ ನಿಂತಿತ್ತು. ಎಸ್.ಎಸ್. ಇಂಜಿನಿಯರ್ಸ್ ಮುಂದುವರೆಸುವ ಜವಾಬ್ದಾರಿಯನ್ನು ಹೊತ್ತಿತ್ತು. ಎಲ್ಲಾ ಕಚ್ಚಾ ಸಾಮಗ್ರಿಗಳನ್ನು ಕಿರ್ಲೋಸ್ಕರ್ ಕಾರ್ಖಾನೆಯವರೇ ಪೂರೈಸುತ್ತಿದ್ದರು, ನಮ್ಮ ತಂಡದ ಜವಾಬ್ದಾರಿ ನೂತನ ಕಟ್ಟಡದ ಪ್ರಾರಂಭೋತ್ಸವದ ಮುನ್ನ ಕೆಲಸ ಮುಗಿಸಿಕೊಡುವುದಷ್ಟೆ! ದಿನಾಲು ಕಾಫಿ, ಟೀ ಹಾಗು ಊಟ ಕಿರ್ಲೋಸ್ಕರ್ ನಲ್ಲೇ ಆಗುತ್ತಿತ್ತು. ಕಚ್ಚಾ ಸಾಮಗ್ರಿಗಳನ್ನು ಅಲ್ಲಿನ ಉಗ್ರಾಣದಿಂದ ತರಲು ಬೇಕಾಗಿದ್ದ ಕಾಗದ ಪತ್ರಗಳ ಮೇಲಿನ ಹಸ್ತಾಕ್ಷರವನ್ನು ಪಡೆಯಲು ಸಂಬಂಧ ಪಟ್ಟ ಅಧಿಕಾರಿಗಳನ್ನು ಹುಡುಕುತ್ತಾ ಕಾರ್ಖಾನೆಯ ಆವರಣದಲ್ಲಿ ಓಡಾಡುವಾಗ ಅಲ್ಲಿನ ವಾತಾವರಣ ಕಂಡು ನನ್ನ ಆಗಿನ ವಲಸೆ ಮಾದರಿಯ ಕೆಲಸಕ್ಕೆ ಹೋಲಿಸಿ, ಕೆಲಸ ಮಾಡಿದರೆ ಇಂಥಾ ಕಂಪೆನಿಯಲ್ಲಿ ಮಾಡಬೇಕೆನಿಸುತ್ತಿತ್ತು! ಮುಂದೆ ಹದಿನಾರುವರೆ ವರ್ಷ ಇಲ್ಲಿ ಮಣ್ಣು ಹೊರುವೆನೆಂದು ಆಗ ಅನ್ನಿಸಿರಲಿಲ್ಲ! ಎಲ್ಲಾ ಸುಗಮವಾಗಿದ್ದರೆ ನಮ್ಮನ್ನು ಹಿಡಿಯುವವರು ಯಾರು? ಇದ್ದಕ್ಕಿದ್ದ ಹಾಗೇ ಎಸ್.ಎಸ್.ಇಂಜಿನಿಯರ್ಸ್ ನಲ್ಲಿನ ವಾತಾವರಣ ಯಾಕೋ ಸರಿಯೆನಿಸುತ್ತಿರಲಿಲ್ಲ. ನನ್ನನ್ನು ನಡೆಸಿಕೊಳ್ಳುತ್ತಿದ್ದ ರೀತಿ, ಬೆನ್ನ ಹಿಂದೆ ಮಾಡುತ್ತಿದ್ದ ಟೀಕೆಗಳಿಗೆ ಬೇಜಾರಾಗಿ ಒಮ್ಮೆಲೇ ರಾಜೀನಾಮೆ ಕೊಟ್ಟಿದ್ದೆ. ಮುಂದೇನು...?

ಶೇಷಗಿರಿಯು ಉದ್ಯೋಗ ಮಾಡುತ್ತಿದ್ದ ಎನ್.ಐ.ಇ ಸಂಸ್ಥೆಯಲ್ಲಿನ ಸಹೋದ್ಯೋಗಿಗಳಾದ ಶ್ರೀಯುತ ಭಾಸ್ಕರ್ ಬಾಳಿಗರ ತಮ್ಮನಾದ ಶಿವಾನಂದ ಬಾಳಿಗರು ಒಬ್ಬ ಗೃಹ ವಿದ್ಯುದ್ದೀಕರಣದ ಗುತ್ತಿಗೆದಾರರಾಗಿದ್ದು, ಅವರಿಗೆ ಮೇಸ್ತ್ರಿಯೊಬ್ಬರ ಅವಶ್ಯಕತೆ ಇದ್ದು ಆ ಕೆಲಸ ನನಗೆ ದಕ್ಕಿತ್ತು.

ಬೆಳಿಗ್ಗೆ ತಿಂಡಿ ತಿಂದು ೮–೦೦ ಘಂಟೆಗೆ ಶಿವಾನಂದ ಬಾಳಿಗರು ದಯಪಾಲಿಸಿದ್ದ ಸೈಕಲ್ ಏರಿ ಹೊರಟು ಮೈಸೂರಿನ ನೂರಡಿ ರಸ್ತೆಯ ಸಮೀಪದಲ್ಲಿದ್ದ ಅವರ ಮನೆಯನ್ನು ತಲುಪಿ ಅಂಗಡಿಯ ಕೀಲಿ ಕೈಯನ್ನು ಪಡೆದು ಅಲ್ಲೇ ಸಮೀಪದ ದಿವಾನ್ಸ್ ರಸ್ತೆಯಲ್ಲಿದ್ದ ಅಂಗಡಿಯ ಬಾಗಿಲನ್ನು ತೆರೆದು ಕಸ ಗುಡಿಸಿ, ನೀರು ಚಿಮುಕಿಸಿ, ದೇವರಿಗೆ ದೀಪ ಹಚ್ಚಿ ಅಂಗಡಿಯನ್ನು ಒಪ್ಪ ಓರಣ ಮಾಡುವಷ್ಟರಲ್ಲಿ ಶಿವಾನಂದ ಬಾಳಿಗರು ಬರುತ್ತಿದ್ದರು. ಅವರು ಹೇಳಿದ ಕೆಲಸದ ವಿವರವನ್ನು ಆಲಿಸಿ ಕೊಟ್ಟ ಸಾಮಗ್ರಿಗಳ ಉದ್ದದ ಪಟ್ಟಿಯನ್ನು ಜೇಬಿಗೆ ಸೇರಿಸಿ ಕಾಳಮ್ಮ ದೇವಸ್ಥಾನದ ಬೀದಿಯಲ್ಲಿರುವ ನಿಗದಿತ ಅಂಗಡಿಗಳಲ್ಲಿ ವಿದ್ಯುತ್ ಕಚ್ಚಾ ಸಾಮಗ್ರಿಗಳನ್ನು ಪಡೆದು ಅವುಗಳನ್ನು ಸೈಕಲ್ಲಿಗೆ ಕಟ್ಟಿ, ಲೆಕ್ಕ ಬರೆಯಿಸಿ ಮೈಸೂರಿನ ಸುತ್ತಾ ಹೊರ ವಲಯದಲ್ಲೆಲ್ಲಾ ನಡೆಯುತ್ತಿದ್ದ ಮನೆಗಳ ವಿದ್ಯುದ್ದೀಕರಣದ ಜಾಗಕ್ಕೆ ರವಾನಿಸಬೇಕಾಗಿತ್ತಲ್ಲದೆ ಅಲ್ಲಿನ ಕೆಲಸದ ಪ್ರಗತಿಯನ್ನು ಪಟ್ಟಿ ಮಾಡಿ ಮತ್ತೇನಾದರು ಕಚ್ಚಾವಸ್ತುಗಳ ಬೇಡಿಕೆ ಇದ್ದರೆ ತಿಳಿದುಕೊಂಡು ಬರಬೇಕಿತ್ತು. ಇಷ್ಟೆಲ್ಲಾ ಮುಗಿಸಿ ಅಂಗಡಿಗೆ ಹಿಂದಿರುಗಿ ಬರುವಷ್ಟರಲ್ಲಿ ಸಂಜೆಯ ಗಡಿ ದಾಟಿರುತ್ತಿತ್ತು. ಸಂಜೆಯ ನಂತರ ಅಂಗಡಿಯಲ್ಲಿ ಉಪಸ್ಥಿತನಿದ್ದಾಗ ವಿದ್ಯುತ್ ಉಪಕರಣಗಳ ದುರಸ್ಥಿ ಮಾಡಲು ಸಹಾಯ ಹಸ್ತ ಚಾಚಬೇಕಿತ್ತು. ರಾತ್ರಿ ೮–೦೦ ಘಂಟೆಗೆ ಅಂಗಡಿಯ ಬಾಗಿಲು ಮುಚ್ಚಿ ಕೀಲಿಕೈಯನ್ನು ಶಿವಾನಂದ ಬಾಳಿಗರಿಗೆ ಕೊಟ್ಟು ಮನೆಗೆ ವಾಪಸ್ ಹೊರಡುವಾಗ ತಪ್ಪದೇ ಯಾವುದಾದರು ಗಿರಾಕಿಗಳಿಂದ ಬಾಕಿ ವಸೂಲಿ ಅಥವಾ ಕಾಳಮ್ಮ ದೇವಸ್ಥಾನದ ಬೀದಿಯಲ್ಲಿರುವ ಅಂಗಡಿಗಳಿಗೆ ಹಣ ಪಾವತಿಯೋ ಮಾಡಬೇಕಿತ್ತು. ಅದನ್ನೆಲ್ಲಾ ಮುಗಿಸಿ ಮನೆ ತಲುಪುವಷ್ಟರಲ್ಲಿ ವೇಳೇ ಹತ್ತು ಘಂಟೆ ದಾಟಿರುತ್ತಿತ್ತು. ಹೀಗೆ ಸೈಕಲ್ಲನ್ನೇರಿ ಮೈಸೂರಿನ ಉದ್ದಗಲಕ್ಕೂ ಮಳೆ ಬಿಸಿಲು, ಚಳಿ ಗಾಳಿ ಎನ್ನದೆ ವಿದ್ಯುತ್ ಸಾಮಾನುಗಳನ್ನು ಹೇರಿಕೊಂಡು ಅಲೆಯುವ ಕಾಯಕ ತಿಂಗಳಿಗೆ ೨೫೦–೦೦ ರೂಪಾಯಿಯನ್ನು ಗಳಿಸಿ ಕೊಡುತ್ತಿತ್ತು ಅಂದರೆ ಎಸ್.ಎಸ್.ಇಂಜಿನಿಯರ್ಸ್ ಗಿಂತ ೫೦–೦೦ ರೂಪಾಯಿ ಹೆಚ್ಚಿಗೆ!

ಆರು ತಿಂಗಳು ಕಳೆದಿತ್ತು, ಗೆಳೆಯ ರಾಮಗೋಪಾಲನು ಸಿಕ್ಕಿ ಆತ ಉದ್ಯೋಗ ಮಾಡುತ್ತಿದ್ದ ವಿದ್ಯಾವರ್ಧಕ ಐ.ಟಿ.ಐ ನಲ್ಲಿ ಅಧ್ಯಾಪಕನ ಹುದ್ದೆ ಖಾಲಿ ಇದೆ ಸೇರ್ಕೋ೯ತೀಯಾ? ಎಂದ. ನನ್ನ ಪ್ರಶ್ನೆ ಸಂಬಳ ಎಷ್ಟು ಮತ್ತು ಏನು ಕೆಲಸ?

ಅವನುತ್ತರಿಸಿದ್ದು ೪೦೦–೦೦ ರೂಪಾಯಿ ಮಾಸಿಕ ಸಂಬಳ ಮತ್ತು ದಿನಕ್ಕೆ ನಾಲ್ಕು ಘಂಟೆ ಪಾಠ ಮಾಡಬೇಕು. ನನಗೋ ಒಂದೆಡೆ ಸಂತೋಷ, ಸಂಬಳದ ವಿಚಾರವಾಗಿ, ಅಲೆಯುವ ಸ್ಥಿತಿ ಇಲ್ಲಾ, ನೆರಳಿನಲ್ಲಿ ಸಾಗುವ ಕೆಲಸ, ಮರ್ಯಾದೆ ಗಳಿಸುವ ಹುದ್ದೆ. ಮತ್ತೊಂದೆಡೆ ಧೈರ್ಯವಾಗಿ ನಿಲ್ಲಬಲ್ಲೆನೇ ನಾನು ವಿದ್ಯಾರ್ಥಿಗಳ ಮುಂದೆ? ನಿಂತು ಪಾಠ ಮಾಡುವಷ್ಟು ಯೋಗ್ಯನೇ ಎಂಬ ಅಳುಕು. ಕಡೆಗೆ ಆದದ್ದಾಗಲಿ, ಹೇಗೂ ರಾಮಗೋಪಾಲನಿದ್ದಾನೆ ಜೊತೆಯಲ್ಲಿ, ಗೊತ್ತಾಗದ ವಿಷಯಗಳ ಬಗ್ಗೆ ಅವನಿಂದ ಕಲಿತು ಹುಡುಗರಿಗೆ ಕಲಿಸಿದರಾಯಿತು ಎಂದು ಒಪ್ಪಿಗೆ ಸೂಚಿಸಿದೆ. ಶಿವಾನಂದ ಬಾಳಿಗರಿಗೆ ಇಷ್ಟವಿರಲಿಲ್ಲ ನನ್ನನ್ನು ಬಿಟ್ಟುಕೊಡಲು, ಆಗ ಅವರ ಅಣ್ಣನವರಾದ ಭಾಸ್ಕರ್ ಬಾಳಿಗರ ಮುಖಾಂತರ ಶಿಫಾರಸು ಮಾಡಿಸಿ ಬಾಳಿಗ ಎಲೆಕ್ಟ್ರಿಕಲ್ಸ್‌ನಿಂದ ಹೊರಗೆ ಬಂದೆ. ವಿದ್ಯಾವರ್ಧಕ ಸಂಸ್ಥೆಗೆ ದಾಖಲಾದಾಗಲಿನಿಂದ ಪ್ರತೀದಿನ ರಾಮಗೋಪಾಲನೊಡನೆ ಸೈಕಲ್‌ನಲ್ಲಿ ಡಬಲ್ಸ್‌ನಲ್ಲಿ ವಿದ್ಯಾಸಂಸ್ಥೆ ಹಾಗೂ ಮನೆಯ ನಡುವಣ ದೂರವನ್ನು ಕ್ರಮಿಸುವ ಪರಿಪಾಠವಾಯಿತು.

ವಿದ್ಯಾರ್ಥಿಗಳ ಮುಂದೆ ನಿಲ್ಲಲು ಆರಂಭದಲ್ಲಿ ಬಹಳ ಇರುಸು ಮುರುಸಾಗುತ್ತಿತ್ತು. ದಿನಗಳುರುಳಿದಂತೆ ಅರಿತಿದ್ದೇನೆಂದರೆ ಪ್ರವಚನಕ್ಕೆ ತಯಾರಿ ಚೆನ್ನಾಗಿರಬೇಕು, ಯಾವ ವಿಷಯದ ಬಗ್ಗೆ ಪಾಠ ಮಾಡುವುದಿದೆಯೋ ಅದರಾಚೆಯ ವಿಚಾರವನ್ನೂ ಅರಿತಿರುವುದರ ಜೊತೆಗೆ ಸಮಯಪ್ರಜ್ಞೆ ಇರಬೇಕಲ್ಲದೇ ಅದೆಲ್ಲದಕ್ಕಿಂತ ಬಹು ಮುಖ್ಯವಾದ ಅವಶ್ಯಕತೆಯೆಂದರೆ ನಮ್ಮ ಬಗ್ಗೆ ದೃಢವಾದ ನಂಬಿಕೆ ಮತ್ತು ಆತ್ಮಸ್ಥೈರ್ಯ. ಕ್ರಮೇಣ ನಿರರ್ಗಳವಾಗಿ ತರಗತಿಗಳನ್ನು ಭರಿಸುವುದು ಅಭ್ಯಾಸವಾಗಿ ಹೋಯಿತು. ಕಲಿಸುವ ಈ ಭರದಲ್ಲಿ ಮನಗಂಡಿದ್ದು ನನ್ನ ಜ್ಞಾನಮಟ್ಟದ ಪ್ರಗತಿ ಮತ್ತು ಪಠ್ಯ ವಿಷಯುಗಳು ಮನನವಾಗುತ್ತಿದ್ದ ರೀತಿ ನಾನು ವಿದ್ಯಾರ್ಥಿಯಾಗಿದ್ದಕ್ಕಿಂತಲೂ ಉನ್ನತ ಶ್ರೇಣಿಯದಾಗಿತ್ತು. ಇಲ್ಲಿನ ಜೀವನ ಶೈಲಿ ಬಹಳ ಹರುಷ ತಂದಿತ್ತು, ವಿದ್ಯಾರ್ಥಿಗಳು ಸಾರ್ ಎಂದು ಗೌರವ ಸೂಚಿಸುತ್ತಿದ್ದರೆ ಹೆಮ್ಮೆ ಎನ್ನಿಸುತ್ತಿತ್ತು. ಕೆಲವೊಮ್ಮೆ, ಮನೆಯವರ ಅಥವಾ ಸ್ನೇಹಿತರ ಅದರಲ್ಲೂ ನೆಂಟರ ಜೊತೆಯಲ್ಲಿ ಹೊರಗಿರುವಾಗ ಯಾರಾದರು ವಿದ್ಯಾರ್ಥಿಗಳು ಎದುರುಗೊಂಡು ಗುರುತಿಸಿ ಗೌರವ ಸಲ್ಲಿಸಿದರಂತು ಮುಗಿಯಿತು ಕಥೆ, ಗಗನದಲ್ಲಿ ತೇಲಾಡುತ್ತಿರುವಂತೆ ಭಾಸವಾಗುತ್ತಿತ್ತು!

ವಿದ್ಯಾವರ್ಧಕ ಐ.ಟಿ.ಐ.ನಲ್ಲಿ ವಿದ್ಯಾರ್ಥಿಗಳಿಗೆ ಅತೀ ಕನಿಷ್ಟ ಸವಲತ್ತುಗಳಿದ್ದವು. ಪಾಠ ಪ್ರವಚನಗಳ ಜೊತೆಗೆ ಅವರಿಗೆ ಇಲ್ಲಿ ದೊರಕುತ್ತಿದ್ದದ್ದು ಪ್ರಾಥಮಿಕ ಮಟ್ಟದ ಪ್ರಯೋಗಗಳಿಗೆ ಯೋಗ್ಯವೆನ್ನುವ ಸೌಲಭ್ಯ ಮಾತ್ರ. ಇನ್ನು ಉನ್ನತ ಮಟ್ಟದ ಪ್ರಯೋಗಗಳನ್ನು ಅಭ್ಯಾಸ ಮಾಡಿ ಕಲಿಯಲು ಸರ್ಕಾರೀ ಐ.ಟಿ.ಐ.ಗೆ

ಆಗೊಮ್ಮೆ ಈಗೊಮ್ಮೆ ಕರೆದೊಯ್ಯಲಾಗುತ್ತಿತ್ತು. ಅಲ್ಲಿಯೂ ಸಹ ಅವರಿಗೆ ಸರಿಯಾದ ತರಬೇತಿಗೆ ಅವಕಾಶವಿರಲಿಲ್ಲ. ಯಾಕೆಂದರೆ ಇಲ್ಲಿನ ವಿದ್ಯಾರ್ಥಿಗಳಿಗೆ ಕಟ್ಟ ಕಡೆಯ ಆದ್ಯತೆ. ಪರೀಕ್ಷಾ ಸಮಯ ಸಮೀಪಿಸುತ್ತಿದ್ದಂತೆ ವಿದ್ಯಾರ್ಥಿಗಳೆಲ್ಲಾ ಸಂಸ್ಥೆಯ ವ್ಯವಸ್ಥೆಯಲ್ಲಿನ ಕುಂದುಕೊರತೆಗಳ ಪಟ್ಟಿಯನ್ನು ವ್ಯವಸ್ಥಾಪಕ ಮಂಡಲಿಯ ಮುಂದೆ ಇಟ್ಟರು. ಯಾವ ಪ್ರತಿಕ್ರಿಯೆಯು ಬಾರದಾಗ ದಂಗೆ ಎದ್ದು ಹರತಾಳ ಆರಂಭಿಸಿದರು. ಒಂದು ವಾರದ ತರುವಾಯ ಸಂಸ್ಥೆಯ ವ್ಯವಸ್ಥಾಪಕರು ವಿದ್ಯಾರ್ಥಿಗಳ ಮುಂದೆ ನಿಂತ ಕೂಡಲೇ ಎರಡೂ ಕಡೆಯಿಂದ ವಾಗ್ದಾಳಿ ಆರಂಭವಾಯಿತು.

ವಿದ್ಯಾರ್ಥಿಗಳ ಸವಾಲು ಸಂಸ್ಥೆ ಕೇಳಿದಷ್ಟು ಹಣವನ್ನು ಪಾವತಿಸಿ ದಾಖಲಾಗಿದ್ದಕ್ಕೆ ತಕ್ಕಂತೆ ಸೌಲಭ್ಯವನ್ನು ಒದಗಿಸುವುದರಲ್ಲಿ ಯಾಕೆ ವಿಳಂಬ?

ವ್ಯವಸ್ಥಾಪಕರ ಜವಾಬು "ನೀವು ಪಾವತಿಸಿದ ಹಣಕ್ಕೆ ಇಷ್ಟೇ ಸೌಲಭ್ಯ".

ವಿದ್ಯಾರ್ಥಿಗಳ ಸವಾಲು ಸಂಸ್ಥೆಗೆ ಪಾವತಿಸಿದ ಹಣಕ್ಕಿಂತ ಅತೀ ಕಡಿಮೆ ಹಣವನ್ನು ಸರ್ಕಾರೀ ಐ.ಟಿ.ಐ.ಗೆ ಪಾವತಿಸಿದ್ದರೆ ಉತ್ತಮ ತರಬೇತಿ ದೊರಕುತ್ತಿತ್ತು

ವ್ಯವಸ್ಥಾಪಕರ ಜವಾಬು ಸರ್ಕಾರೀ ಐ.ಟಿ.ಐ.ಗೆ ದಾಖಲಾಗಲು ಯೋಗ್ಯತೆ ಇಲ್ಲದ ಕಾರಣ ನೀವೆಲ್ಲಾ ಇಲ್ಲಿ ದಾಖಲಾಗಿರುವುದು ಎಂಬುದನ್ನು ಮರೆಯದಿರಿ.

ವಿದ್ಯಾರ್ಥಿಗಳ ಸವಾಲು "ನಮ್ಮ ಹಣ ವಾಪಸ್ ಮಾಡಿ, ನಾವೆಲ್ಲಾ ಬೇರೆ ಕಡೆ ಹೋಗುವೆವು"

ಪರಿಸ್ಥಿತಿ ಹದಗೆಡುತ್ತಿದ್ದುದ್ದನ್ನು ಗಮನಿಸಿದ ವ್ಯವಸ್ಥಾಪಕರು "ನಿಮ್ಮ ತೊಂದರೆ ಏನೆಂಬುದು ನಮಗೆ ಚೆನ್ನಾಗಿ ಅರ್ಥವಾಗಿದೆ, ಸಾವಕಾಶವಾಗಿ ಎಲ್ಲವನ್ನು ಪರಿಹರಿಸುತ್ತೇವೆ ಸಂಯಮದಿಂದ ನಡೆದುಕೊಳ್ಳಿ" ಎಂದು ಮುಕ್ತಾಯ ಹಾಡಿದ್ದರು.

ಏಳು ತಿಂಗಳು ಮುಗಿಯುತ್ತಾ ಬಂದಿತ್ತು ವಿದ್ಯಾವರ್ಧಕ ಶಿಕ್ಷಣ ಸಂಸ್ಥೆಯಲ್ಲಿ ಸೇವೆ ಸಲ್ಲಿಸಲು ಆರಂಭಿಸಿ, ಆಗ ಸ್ನೇಹಿತ ಶೇಷಗಿರಿಯು ತನಗೆ ಮೈಸೂರಿನ ಇಲವಾಲದ ಹತ್ತಿರ ಇರುವ ಆರ್.ಎಮ್.ಪಿ ಎಂಬ ಕೇಂದ್ರ ಸರ್ಕಾರದ ಅನುದಾನದ ಸಂಸ್ಥೆಯಲ್ಲಿ ಉದ್ಯೋಗ ಲಭಿಸಿದೆ, ಎನ್.ಐ.ಇ ಸಂಸ್ಥೆಯನ್ನು ಬಿಡುತ್ತಿದ್ದೇನೆ, ಬದಲೀ ವ್ಯವಸ್ಥೆಗೆ ಸಹಾಯ ಮಾಡಬೇಕು, ನಿನಗೆ ಒಪ್ಪಿಗೆಯಾದರೆ ನಿನ್ನ ಹೆಸರನ್ನು ಸೂಚಿಸುತ್ತೇನೆ ಎಂದ. ಎನ್.ಐ.ಇ ಸಂಸ್ಥೆಯು ನಾವಿದ್ದ ವಠಾರದಿಂದ ಐದು ನಿಮಿಷದ ಕಾಲ್ನಡಿಗೆಯ ದೂರ, ೭೦೦-೦೦ ರೂಪಾಯಿ ಮಾಸಿಕ ಸಂಬಳ, ಒಂದೇ ಸಲಕ್ಕೆ ೩೦೦-೦೦ ರೂಪಾಯಿಗಳ ಬಡ್ತಿ, ಸೈಕಲ್ ತುಳಿಯುವ ಅಗತ್ಯವಿಲ್ಲ, ಪಾಠ ಮಾಡುವ

ಹಾಗಿಲ್ಲ! ಯಾರಿಗೆ ಬೇಡ? ಸರಿ, ರಾಮಗೋಪಾಲನಿಗೆ ವಿಷಯ ತಿಳಿಸಿ ಅವನ ಮೂಲಕ ಸಂಸ್ಥೆಯ ವ್ಯವಸ್ಥಾಪಕರಿಗೆ ರಾಜೀನಾಮೆ ಸಲ್ಲಿಸಿದೆ. ಬದಲೀ ವ್ಯವಸ್ಥೆ ಆಗುವುದಕ್ಕೆ ಒಂದು ತಿಂಗಳ ಸಮಯ ಹಿಡಿಯಿತು.

ಎನ್.ಐ.ಇ ಸಂಸ್ಥೆಗೆ ದಾಖಲಾದ ಸುಮಾರು ಒಂದು ತಿಂಗಳಿನಲ್ಲಿ, ವಿದ್ಯುತ್ ಪ್ರಯೋಗಾಲಯದಲ್ಲಿ ನಡೆಸುತ್ತಿದ್ದ ಎಲ್ಲಾ ಪ್ರಯೋಗಗಳು ಕರತಲಾಮಲಕವಾಗಿತ್ತು. ಉಪಾಧ್ಯಾಯರ ಬಳಗದಲ್ಲಿ ಶ್ರೀಯುತ ಪ್ರಕಾಶ್‌ರಾವ್ ಎಂಬುವರು ಪರಿಚಯವಾದರು. ಇಲ್ಲಿ ಏನಂಥಾ ವಿಶೇಷತೆಯಿಲ್ಲದೆ ಸಮಯ ಕಳೆಯುತ್ತಿತ್ತಷ್ಟೆ. ಋಣಾತ್ಮಕವಾದ ಅಂಶವೆನಿಸಿದ್ದು ಪ್ರತೀ ಆರು ತಿಂಗಳಿಗೊಮ್ಮೆ ಸೇವಾವಧಿಯನ್ನು ಪುನರ್ನವೀಕರಿಸುವಿಕೆ ಹಾಗೂ ವ್ಯತ್ಯಾಸವೇನಿಲ್ಲದ ಸಂಬಳ.

ಇನ್ನು ಮನೆಯ ಕಡೆ, ಗೀತೆಯಲ್ಲಿನ ಕೃಷ್ಣನ, ಸಂಭವಾಮಿ ಯುಗೇ ಯುಗೇ ಎಂಬ ಉವಾಚ ಪಾಲಿಸಲೋ ಎಂಬಂತೆ ನಮ್ಮ ಮನೆಯಲ್ಲಿಯೂ ದಶಾವತಾರವಾಗಿತ್ತು ನೇತ್ರಾವತಿಯ ರೂಪದಲ್ಲಿ! ಕೃಷ್ಣನು ಅರ್ಜುನನಿಗೆ ಮಾತು ಕೊಟ್ಟಿದ್ದು, ಈ ಜಗತ್ತಿನಲ್ಲಿ ಅನ್ಯಾಯ, ಅಧರ್ಮ ಮಿತಿ ಮೀರಿ ಪಾಮರರು ಸಂಕಷ್ಟಕ್ಕೆ ಸಿಲುಕಿದಾಗಲೆಲ್ಲಾ ತಾನು ಬಂದು ಪರಿಹರಿಸುತ್ತೇನೆಂದು, ಆದರೆ ನಮ್ಮ ಸಂಸಾರವನ್ನು ಮಾತ್ರ ಕಷ್ಟ ಕೋಟಲೆಗಳೊಂದಿಗೆ ಒರೆ ಹಚ್ಚಿ ಹೊಳಪು ನೀಡಲು ನಿರ್ಧರಿಸಿದ್ದಂತಿತ್ತು.

ಆಶ್ಚರ್ಯದ ಪರಮಾವಧಿ ಎನ್ನುವಂತೆ ಅರ್ಜಿ ಸಲ್ಲಿಸಿದ್ದ ಎರಡು ವರ್ಷಗಳ ತರುವಾಯ ಕಿರ್ಲೋಸ್ಕರ್ ಎಲೆಕ್ಟ್ರಿಕ್ ಕಾರ್ಖಾನೆಯಿಂದ ಸಂದರ್ಶನಕ್ಕೆ ಹಾಜರಾಗಲು ಕರೆ ಬಂತು! ನಂಬಿಕೆ ಬರಲಿಲ್ಲ, ದಿನಾಂಕ ಮತ್ತು ಇಸವಿಯನ್ನು ಕೂಲಂಕಷವಾಗಿ ಪರಿಶೀಲಿಸಿದೆ, ತುಂಬಾ ತಡವಾಗಿ(?) ಬಂದ ಅಂಚೆ ಇರಬೇಕೆಂದು. ಇಲ್ಲಾ, ಎಲ್ಲಾ ಸರಿಯಾಗಿತ್ತು. ಸರಿ ಪ್ರಯತ್ನಿಸೋಣ, ಎನ್.ಐ.ಇ. ಸಂಸ್ಥೆಯಲ್ಲಿ ಹೇಗಿದ್ದರು ಸಂಬಳದಲ್ಲಿ ಬದಲಾವಣೆ ಇಲ್ಲದ ಹಂಗಾಮಿ ಹುದ್ದೆ! ವಿಪರ್ಯಾಸವೆಂದರೆ, ನಮ್ಮ ಜೀವಿತವೇ ಹಂಗಾಮಿ, ಮೂರು ದಿನ ಇದ್ದು ಹೋಗುವವರು, ಅಂತಹ ಬದುಕಿನಲ್ಲಿ ನಾವು ಖಾಯಂ ಹುದ್ದೆಯನ್ನು ಅರಸುತ್ತಾ ಇರುವುದರ ಜೊತೆಗೆ ಖಾಯಂ ವಿಳಾಸ ಎಂದು ನಮೂದಿಸುತ್ತಿರುತ್ತೇವೆ ಎಲ್ಲಾ ಅರ್ಜಿಗಳಲ್ಲಿ!

ಇಸವಿ ೧೯೮೬, ಹ್ಯಾಲೀ ಎಂಬ ಹೆಸರಿನ ಧೂಮಕೇತು ಭೂಮಿಗೆ ಅತೀ ಸಮೀಪದಲ್ಲಿ ಹಾದು ಹೋಗುವ ವಿದ್ಯಮಾನವನ್ನು ದೂರದರ್ಶಕದ ಮೂಲಕ ವೀಕ್ಷಿಸುವ ಸದವಕಾಶವನ್ನು ಯಾದವಗಿರಿಯಲ್ಲಿರುವ ಶ್ರೀ ರಾಮಕೃಷ್ಣ ವಿದ್ಯಾಲಯವು ಆಯೋಜಿಸಿತ್ತು! ಆಗ್ಗೆ ಶೇಷಗಿರಿಯು ನಕ್ಷತ್ರ ವೀಕ್ಷಣೆಯ ಹವ್ಯಾಸದಲ್ಲಿ ತನ್ನನ್ನು

ತೊಡಗಿಸಿಕೊಂಡಿದ್ದು, ಈ ಅವಕಾಶವನ್ನು ಉಪಯೋಗಿಸಿಕೊಳ್ಳಲು ನನ್ನನ್ನು ಹಾಗು ರಾಮಗೋಪಾಲನನ್ನು ಸೇರಿಸಿ ಮಿಕ್ಕ ಕೆಲವು ಸ್ನೇಹಿತರೊಡಗೂಡಿ ಶ್ರೀ ರಾಮಕೃಷ್ಣ ವಿದ್ಯಾಲಯಕ್ಕೆ ತೆರಳಿ ಧೂಮಕೇತುವಿನ ಬರೀಗಣ್ಣಿಗೆ ಕಾಣದ ದೃಶ್ಯವನ್ನು ದೂರದರ್ಶಕದ ಮೂಲಕ ನೋಡಿ ಕಣ್ಣಲ್ಲಿ ತುಂಬಿಕೊಳ್ಳಲು ಅವಕಾಶ ಕಲ್ಪಿಸಿದ್ದ. ಇದರಿಂದ ಪ್ರೇರಿತನಾದ ನಾನು ತದ ನಂತರ ಕತ್ತಲಿನಲ್ಲಿ ಬಾನಂಗಳವು ತನ್ನದೇ ಆದ ಪ್ರತ್ಯೇಕತೆಯಲ್ಲಿ ಮಿನುಗಿ ಮಿಂಚುವ ಅದ್ಭುತ ಪ್ರಪಂಚವನ್ನು ನೋಡಿ ಮೈ ಮರೆಯಲು ಸಾಧ್ಯವಾದಾಗಲೆಲ್ಲಾ ಶೇಷಗಿರಿಯೊಡನೆ ಮೈಸೂರಿನ ಹೊರ ವಲಯವನ್ನು ತಲುಪಿ ಕೆಲವು ಗ್ರಹ ಮತ್ತು ಹಲವಾರು ನಕ್ಷತ್ರ ಪುಂಜಗಳನ್ನು ಗುರುತಿಸುವ ಪರಿಣಿತಿಗೆ ನಾಂದಿಯಾಯಿತು.

ನಿಗದಿತ ದಿನ ಕಿರ್ಲೋಸ್ಕರ್ ಕಾರ್ಖಾನೆಯ ಸಂದರ್ಶನಕ್ಕೆ ಹಾಜರಾಗಲು ಸಿದ್ಧನಾಗಿ(?) ತಂದೆಯವರ, ಜಾರದಿರಲೆಂದು ಉಡಿದಾರಕ್ಕೆ ಸಿಕ್ಕಿಸಿದ ಷರಾಯಿ, ಸಿಕ್ಕಿಸಿದ್ದು ಕಾಣದಿರಲೆಂದು ತೊಟ್ಟಿದ್ದ ಅರ್ಧ ತೋಳಿನ ಅಂಗಿ, ಕಾಲಲ್ಲಿ ಹವಾಯಿ ಚಪ್ಪಲಿ ಮತ್ತು ಕೈಯಲ್ಲಿ ಪ್ರಮಾಣ ಪತ್ರಗಳನ್ನು ಜೋಪಾನವಾಗಿ ಇರಿಸಿದ್ದ ಪೇಪರ್ ಕಡತದೊಂದಿಗೆ ನಿಗದಿತ ವೇಳೆಗೆ ಕಿರ್ಲೋಸ್ಕರ್ ಕಾರ್ಖಾನೆಯನ್ನು ತಲುಪಿದೆ. ಅಲ್ಲೊಬ್ಬ ಅಭ್ಯರ್ಥಿ ಆಗಲೇ ಬಂದು ಕುಳಿತಿದ್ದ. ಫಳಫಳ ಹೊಳೆಯುತ್ತಿದ್ದ ಕರೀ ಬಣ್ಣದ ಶೂಸು, ಇಸ್ತ್ರಿ ಮಾಡಿದ ಗರಿಗರಿ ಶರಟು ಮತ್ತು ಪ್ಯಾಂಟು, ಟಕ್ ಇನ್ ಮಾಡಿ ಟೈ ಕಟ್ಟಿದ್ದ, ತೊಡೆಯ ಮೇಲೆ ಸೊಗಸಾದ ಚರ್ಮದ ಚೀಲ! ನಾನಂದುಕೊಂಡೆ, ಮುಗಿಯಿತು ನನ್ನ ಕಥೆ. ಬಂದ ದಾರಿಗೆ ಸುಂಕವಿಲ್ಲದಂತೆ ಹೊರಡಬೇಕಷ್ಟೆ. ಆನಂತರ ನಂದಕುಮಾರ್ ಮತ್ತು ಪ್ರಕಾಶ್ ಎಂಬಿಬ್ಬರು ಬಂದರು ಅಂದ ಹಾಗೆ ಮೊದಲು ಬಂದಿದ್ದವನ ಹೆಸರು ವಿದ್ಯಾರಣ್ಯ.

ಲಿಖಿತ ಪರೀಕ್ಷೆಯ ನಂತರ ಮುಖಾಮುಖಿ ಪ್ರಶ್ನೋತ್ತರ ಮಾನವ ಸಂಪನ್ಮೂಲ ಅಧಿಕಾರಿಯೊಂದಿಗೆ, ತರುವಾಯ ಮತ್ತ್ಯಾರೋ ಇಬ್ಬರಿಂದ ಪ್ರಶ್ನಾವಳಿಯ ಸುರಿಮಳೆ ಮುಗಿಯುವಷ್ಟರಲ್ಲಿ ಊಟದ ಸಮಯ. ಕಾರ್ಖಾನೆಯ ಭೋಜನ ಶಾಲೆಯಲ್ಲಿ ಸೊಗಸಾದ ಭೋಜನವಾಯಿತು. ಮಧ್ಯಾಹ್ನದ ಚಹ ಸೇವನೆ ಆದ ಮೇಲೆ ಮತ್ತೊಬ್ಬರೊಡನೆ ಸಂದರ್ಶನವಾಯಿತು. ಕಟ್ಟ ಕಡೆಗೆ, ಕಾರ್ಖಾನೆಯ ಮುಖ್ಯಸ್ಥರಾದ ಶ್ರೀಯುತ ಮೋಹನ್ ರಾವ್ ಎಂಬುವರೊಂದಿಗೆ ಸಂದರ್ಶನ ಸಂಜೆ ಏಳೂವರೆಗೆ ಮುಗಿದು ನನ್ನ ಅನಿಸಿಕೆಯನ್ನು ಹುಸಿಗೊಳಿಸಿ ನಂದಕುಮಾರ್ ಮತ್ತು ವಿದ್ಯಾರಣ್ಯರನ್ನು ಆಯ್ಕೆ ಮಾಡಿದ್ದರು, ಜೊತೆಗೆ ನನ್ನನ್ನೂ ಸೇರಿಸಿ!

ಮಾನವ ಸಂಪನ್ಮೂಲ ವಿಭಾಗದ ಕಿರಿಯ ಅಧಿಕಾರಿಯವರಾದ ಶ್ರೀಯುತ ಕೃಷ್ಣಸಿಂಗ್ ಎಂಬುವರು ಒಂದು ವರ್ಷದ ಅವಧಿಯ ತರಬೇತಿಗೆ ಅಪಾಯಿಂಟ್ಮೆಂಟ್

ಆರ್ಡರನ್ನು ನನ್ನ ಕೈಯಲ್ಲಿಟ್ಟು, ಮೋಹನ್, ಕಾರ್ಖಾನೆಗೆ ಬರಬೇಕಾದದ್ದು ಹೀಗಲ್ಲಾ, ಕಾಲಿಗೆ ಶೂಸ್ ಹಾಕಿಕೊಂಡು ಇನ್‌ಶರ್ಟ್ ಮಾಡಿಕೊಂಡು ಬರಬೇಕೆಂದುದ್ದನ್ನು ಕೇಳಿ ನಾಚಿಕೆಯೆನಿಸಿತು ನನಗೆ.

ಇಸವಿ ೧೯೮೬ ಮೇ ತಿಂಗಳ ೧೯ನೇ ದಿನಾಂಕ ಕಿರ್ಲೋಸ್ಕರ್ ಎಲೆಕ್ಟ್ರಿಕ್ ಕಾರ್ಖಾನೆಗೆ ದಾಖಲಾದ ದಿನ. ಮಾನವ ಸಂಪನ್ಮೂಲ ವಿಭಾಗದಲ್ಲಿ ದಾಖಲಾತಿಯ ಕಾರ್ಯಕ್ರಮವನ್ನು ಪೂರೈಸಿ ತರಬೇತಿ ಪ್ರಾಂಗಣದಲ್ಲಿ ನಾವು ಮೂವರು ವಿರಮಿಸುತ್ತಿದ್ದಾಗ, ನಮ್ಮನ್ನು ಸದಾ ಹಸನ್ಮುಖಿಯಾದ ನಾಗರಾಜ ಎಂಬ ಹಿರಿಯ ಉದ್ಯೋಗಿ ಕಾರ್ಖಾನೆಯ ಸಕಲ ವಿಭಾಗಗಳಿಗೆ ಭೇಟಿ ಮಾಡಿಸಿ ಅಲ್ಲಿನ ವಿಭಾಗಾಧಿಕಾರಿಗಳಿಗೆ ನಮ್ಮನ್ನು ಪರಿಚಯಿಸಿ, ತಿರುಗಿ ತರಭೇತಿ ಪ್ರಾಂಗಣದಲ್ಲಿ ಬಿಟ್ಟು ಹೊರಡುವ ಮುಂಚೆ ಹೀಗಂದ–

"ನಿಮ್ಮನ್ನೆಲ್ಲಾ ಎಲ್ಲಾ ವಿಭಾಗಗಳ ಭೇಟಿ ಮಾಡಿಸಿದ್ದರ ಕಾರಣವೇನು ಗೊತ್ತಾ?"

ನಮ್ಮಿಂದೇನೂ ಉತ್ತರ ಬರದಿರುವುದನ್ನು ಗಮನಿಸಿ, ಮುಂದುವರೆದು ಹೇಳಿದ.

"ಮುಂದೆಂದಾದರೂ ನೀವು ಕಾರ್ಖಾನೆಯ ಜನರಲ್ ಮ್ಯಾನೇಜರ್ ಆದರೆ ಎಲ್ಲಾ ವಿಚಾರ ಗೊತ್ತಿರಲಿ ಅಂತ".

ಅವನು ತೆರಳಿದ ಬಳಿಕ ನಾವೆಲ್ಲಾ ಅಲ್ಲಿಯವರೆಗೆ ನಮ್ಮಲ್ಲೇ ಅದುಮಿಟ್ಟುಕೊಂಡಿದ್ದ ನಗುವನ್ನು ನಕ್ಕು ಗೇಲಿ ಮಾಡಿಕೊಂಡು ಆಗಲೇ ನಾಗರಾಜನಿಗೆ ಜಿ.ಎಂ. ನಾಗರಾಜ ಎಂದು ನಾಮಕರಣ ಮಾಡಿದ್ದೆವು. ಮುಂದೆ ಅವನನ್ನು ಜಿ.ಎಂ. ಎಂದೇ ಸಂಭೋಧಿಸುತ್ತಿದ್ದೆವು.

ಆ ವಾರವೆಲ್ಲಾ ಕಾರ್ಖಾನೆಯ ವಿವಿಧ ವಿಭಾಗಗಳ ಕಾರ್ಯಭಾರದ ವಿಸ್ತಾರವಾದ ಪರಿಚಯ, ಸುರಕ್ಷತೆಯ ಬಗ್ಗೆ ಮಾಹಿತಿ ಹಾಗೂ ಕಾರ್ಖಾನೆಯ ನೀತಿ ನಿಯಮಗಳನ್ನು ನಮಗೆಲ್ಲಾ ಮನದಟ್ಟು ಮಾಡಿಕೊಡಲಾಯಿತು. ನಂತರ ನನ್ನನ್ನು ವಿದ್ಯುತ್ ಮೇಲ್ವಿಚಾರಣೆಯ ವಿಭಾಗಕ್ಕೂ, ವಿದ್ಯಾರಣ್ಯನನ್ನು ಡಿಸೈನ್ ವಿಭಾಗಕ್ಕೂ ಹಾಗು ನಂದಕುಮಾರನನ್ನು ಉತ್ಪಾದನಾ ವಿಭಾಗಕ್ಕೆ ವರ್ಗಾಯಿಸಿದರು.

ವಿದ್ಯುತ್ ಮೇಲ್ವಿಚಾರಣೆಯ ವಿಭಾಗದ ಜವಾಬ್ದಾರಿಯೆಂದರೆ ಕಾರ್ಖಾನೆಯ ಸಕಲ ಯಂತ್ರಗಳ ಉಸ್ತುವಾರಿ ಹಾಗೂ ದುರಸ್ಥಿಯೊಂದಿಗೆ ವಿದ್ಯುತ್, ನೀರು ಮತ್ತು ಒತ್ತಡದ ಗಾಳಿಯ ನಿರಂತರ ಸರಬರಾಜನ್ನು ಗಮನಿಸುವುದೂ ಅಲ್ಲದೆ

ಕಾರ್ಖಾನೆಯಲ್ಲಿ ತಯಾರಾದ ಉತ್ಪನ್ನಗಳನ್ನು ಗ್ರಾಹಕರಿಗೆಂದು ರವಾನಿಸುವ ಸಮಯದಲ್ಲಿ ಫ್ಲೋರ್ಕ್‌ಲಿಫ್ಟ್ ಯಂತ್ರದ ಸಹಾಯದಿಂದ ಉತ್ಪನ್ನಗಳನ್ನು ಲಾರಿಗಳಿಗೆ ತುಂಬಿಸುವುದು. ವಾರಕ್ಕೊಮ್ಮೆ ವಿದ್ಯುತ್ ಜನಕ ಯಂತ್ರಕ್ಕೆ ಡೀಸೆಲ್ ಅನ್ನು ೨೦೦ ಲೀಟರ್ ಡ್ರಮ್‌ನಿಂದ ಕೈಪಂಪ್ ಮೂಲಕ ರವಾನಿಸಬೇಕಾಗುತ್ತಿತ್ತು. ನನ್ನ ವಿಭಾಗದಲ್ಲಿದ್ದ ಹಿರಿಯ ಸಹೋದ್ಯೋಗಿ ಮಧ್ಯಾಹ್ನದ ಊಟದ ಸಮಯಕ್ಕೆ ಸರಿಯಾಗಿ ಆ ಕೆಲಸ ಮಾಡಲು ನನ್ನನ್ನು ಕರೆದೊಯ್ಯುತ್ತಿದ್ದರು. ತಾನು ವಿದ್ಯುತ್ ಜನಕದ ಕೋಣೆಯಲ್ಲಿದ್ದು ನನ್ನನ್ನು ಮಟಮಟ ಮಧ್ಯಾಹ್ನ ಬಿಸಿಲಿನಲ್ಲಿ ಹೊರಗೆ ನಿಲ್ಲಿಸಿ ಪಂಪ್ ಮಾಡಿಸುತ್ತಿದ್ದರು. ಆಗ ಊಟಕ್ಕೆಂದು ಕ್ಯಾಂಟೀನ್‌ಗೆ ಹೋಗುತ್ತಿದ್ದ ಸಹೋದ್ಯೋಗಿಗಳ ಸಮೂಹದಲ್ಲಿ ವಿದ್ಯಾರಣ್ಯ ಹಾಗು ನಂದಕುಮಾರ್ ಸಹ ಇದ್ದು ನನ್ನ ಸ್ಥಿತಿಗೆ ಗೇಲಿ ಮಾಡುತ್ತಿದ್ದರು. ಇದನ್ನು ಆ ಹಿರಿಯ ಸಹೋದ್ಯೋಗಿಗೆ ವಿವರಿಸಿ ಊಟದ ವೇಳೆಗೆ ಮೊದಲು ಅಥವ ಊಟದ ವೇಳೆಯ ನಂತರ ಮಾಡೋಣವೆಂದರೆ ಆತ ಒಪ್ಪುತ್ತಲೇ ಇರಲಿಲ್ಲ. ಮುಂದೆ ಅಭ್ಯಾಸವಾಗಿ, ಗೇಲಿ ಮಾಡುತ್ತಿದ್ದರೆ ತಲೆ ಕೆಡಿಸಿಕೊಳ್ಳುತ್ತಿರಲಿಲ್ಲ.

ಸುಮಾರಾಗಿ ಕಾರ್ಖಾನೆಯ ಸಕಲ ಯಂತ್ರಗಳ ದುರಸ್ಥಿ ಹಾಗೂ ಮೇಲ್ವಿಚಾರಣೆಯ ಕೆಲಸ ಕಲಿತಾಗಿತ್ತು. ಸಮಯ ಬಂದರೆ ಒಬ್ಬನೇ ನಿರ್ವಹಿಸುವಷ್ಟು ಪರಿಣತಿಯಾಗಿತ್ತು. ಅಷ್ಟೊತ್ತಿಗೆ, ನಮ್ಮೆಲ್ಲರ ಒಂದು ವರ್ಷದ ತರಭೇತಿ ಅವಧಿ ಮುಗಿಯಲು ಇನ್ನೆರಡು ತಿಂಗಳುಗಳಿದ್ದವು. ಕಿರ್ಲೋಸ್ಕರ್ ಕಾರ್ಖಾನೆಯು ಬೆಳವಾಡಿಯ ಕೈಗಾರಿಕಾ ವಲಯದಲ್ಲಿ ಆರಂಭವಾದಾಗಲಿನಿಂದ ಅಲ್ಲಿಯ ತನಕ ನಡೆದು ಬಂದ ಪರಿಪಾಠವೆಂದರೆ ಪ್ರತೀ ಪರ್ಯಾಯ ವರ್ಷ ಮಾತ್ರ ತರಬೇತಿ ಅವಧಿಯಲ್ಲಿರುವವರನ್ನು ಖಾಯಂ ಹುದ್ದೆಗೆ ಸೇರ್ಪಡೆ ಮಾಡಿಕೊಳ್ಳುತ್ತಿದ್ದದ್ದು. ದುರದೃಷ್ಟವೆಂಬಂತೆ, ಆ ವರ್ಷ ನಮಗ್ಯಾರಿಗೂ ಉದ್ಯೋಗ ಖಾಯಂ ಆಗುವುದಕ್ಕೆ ಅವಕಾಶವಿರಲಿಲ್ಲ! ಈ ಸಂದರ್ಭದಲ್ಲಿ, ಕಿರ್ಲೋಸ್ಕರ್ ಮಾನವಸಂಪನ್ಮೂಲ ವಿಭಾಗಾಧಿಕಾರಿಯಾಗಿದ್ದ ಶ್ರೀಯುತ ಮೋಹನ್ ಕೋಲಾರ್ ಎಂಬುವರು ಕಿರ್ಲೋಸ್ಕರ್ ಕಾರ್ಖಾನೆಯನ್ನು ತ್ಯಜಿಸಿ ಬಳಿಯಲ್ಲೇ ಇದ್ದ ಕರ್ನಾಟಕ ಬಾಲ್ ಬೇರಿಂಗ್ ಕಂಪೆನಿಯಲ್ಲಿ ಸೇವೆ ಸಲ್ಲಿಸುತ್ತಿದ್ದರು. ಅಲ್ಲಿನ ವಿದ್ಯುತ್ ಮೇಲ್ವಿಚಾರಣ ವಿಭಾಗಕ್ಕೆ ಒಬ್ಬ ಮೇಸ್ತ್ರಿಯ ಅವಶ್ಯಕತೆ ಇದ್ದು, ಆ ಜಾಗಕ್ಕೆ ನನ್ನನ್ನು ಭರ್ತಿ ಮಾಡಿಸಲು ಪ್ರಸ್ತಾವಿಸಿದರು. ಸರಿ, ಇಲ್ಲಿ ಹೇಗಿದ್ದರೂ ಕೆಲಸವಿಲ್ಲ, ಬೇರೆ ದಾರಿ ಕಾಣದೆ ಸಂದರ್ಶನದ ಶಾಸ್ತ್ರ ಮುಗಿಸಿ ಅಪಾಯಿಂಟ್ಮೆಂಟ್ ಆರ್ಡರನ್ನು ಕೈಗೆ ತೆಗೆದುಕೊಂಡಾಗಿತ್ತು.

ಎರಡು ತಿಂಗಳ ತರುವಾಯ ಕರ್ನಾಟಕ ಬಾಲ್ ಬೇರಿಂಗ್ ಕಂಪೆನಿಗೆ ಸೇರಿದ್ದಾಯಿತು. ಒಳಗೆ ಹೋದ ಮೇಲೆಯೇ ಅರಿವಾಗಿದ್ದು ಕಾರ್ಖಾನೆ ಅಧೋಗತಿಯಲ್ಲಿದ್ದದ್ದು! ತಿಂಗಳಲ್ಲಿ ಕೇವಲ ನಾಲ್ಕೈದು ದಿನಗಳು ಮಾತ್ರ ಉತ್ಪನ್ನಗಳ ಉತ್ಪಾದನೆ, ಉಳಿದ ದಿನಗಳಲ್ಲೆಲ್ಲಾ ಕಾರ್ಮಿಕರು ಸೊಂಪಾಗಿ ಯಂತ್ರಗಳ ಬಳಿ ಇಸ್ಪೀಟ್, ಹುಲಿ–ಕುರಿಯಾಟ ಆಡುವುದು, ಹರಟೆ ಹೊಡೆಯುವುದು ಇಲ್ಲಾ ಸೊಗಸಾಗಿ ನಿದ್ದೆ ಮಾಡುತ್ತಿದ್ದರು! ಬಹಳ ನಿರಾಸೆಯಾಯಿತು, ಇದೆಲ್ಲಿ ಬಂದು ಸಿಕ್ಕಿ ಹಾಕಿಕೊಂಡೆನೋ ಎಂದು. ದಾಖಲಾಗಿ ಎರಡು ವಾರ ಕಳೆದಿತ್ತು, ಕಷ್ಟಗಳ ಮೇಲೆ ಕಷ್ಟ ಎಂಬಂತೆ, ಕಾರ್ಖಾನೆಯ ವಿದ್ಯುತ್ ಸರಬರಾಜಿನ ಸಬ್ ಸ್ಟೇಷನ್‌ನಲ್ಲಿರುವ ಪಾಟ್ ಹೆಡ್ ಎನ್ನುವ ಸಾಧನ ಸಿಡಿದು ಇಡೀ ಕಾರ್ಖಾನೆಯು ವಿದ್ಯುತ್ ಸಂಪರ್ಕವನ್ನು ಕಡಿದುಕೊಂಡಿತು. ಉತ್ಪಾದನೆಗೆ ಕಚ್ಚಾ ಸಾಮಗ್ರಿ ಬರಲು ಇನ್ನೆರಡು ದಿನ ಬಾಕಿ ಇತ್ತು, ಅಷ್ಟರಲ್ಲಿ ದುರಸ್ತಿಯಾಗಬೇಕಿತ್ತು, ಇಲ್ಲದಿದ್ದರೆ ಆ ಮಾಸದಲ್ಲಿ ಉತ್ಪಾದನೆ ಶೂನ್ಯ. ಕಾರ್ಖಾನೆಯ ನಿಗದಿತ ವಿದ್ಯುತ್ ಗುತ್ತಿಗೆದಾರರಿಗೆ ದುರಸ್ತಿ ಮಾಡಲು ಹೇಳಿದರೆ ಹಳೆಯ ಬಾಕಿ ತೀರಿಸಿಲ್ಲವಾದ್ದರಿಂದ ನಾವು ಮಾಡೊಲ್ಲಾ ಎಂದರು. ಮೇಲಿನಧಿಕಾರಿಗಳಿಂದ ಒತ್ತಡ, ಬೇರೇ ಯಾವುದೇ ಗುತ್ತಿಗೆದಾರರನ್ನು ಕೇಳಿದರೂ ನಿಮ್ಮ ಕಾರ್ಖಾನೆಯ ಕೆಲಸ ಬೇಡ ಎನ್ನುವ ಉತ್ತರ! ಕಡೆಗೆ ನೆನಪಾದದ್ದು ಬಾಳಿಗ ಎಲೆಕ್ಟ್ರಿಕಲ್ಸ್‌ನ ಶಿವಾನಂದ, ನನ್ನ ಮಾಜಿ ಉದ್ಯೋಗದಾತ, ಅವರಿಗೆ ಪರಿಸ್ಥಿತಿಯನ್ನು ವಿವರಿಸಿ ಸಹಾಯ ಮಾಡಲು ಕೋರಿದೆ, ಸಾಮಾನು ಸಲಕರಣೆಗಳನ್ನು ಒದಗಿಸಿದರೆ ಜನರನ್ನು ಕಳುಹಿಸುತ್ತೇನೆಂದರು! ಸರಿ, ಮೇಲಿನಧಿಕಾರಿಗಳಿಗೆ ವಿವರಿಸಿ, ಕಿರ್ಲೋಸ್ಕರ್‌ನಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ಪರಿಚಯವಾಗಿದ್ದ ಕಾಳಮ್ಮ ದೇವಸ್ಥಾನದ ಬೀದಿಯಲ್ಲಿರುವ ರಮೇಶ್ ಟ್ರೇಡಿಂಗ್ ಕಂಪೆನಿಯಲ್ಲಿ ದುರಸ್ಥಿಗೆ ಬೇಕಾದ ವಸ್ತುಗಳನ್ನು ಕೊಂಡು, ಬಾಳಿಗ ಎಲೆಕ್ಟ್ರಿಕಲ್ಸ್‌ನಿಂದ ಸಿಬ್ಬಂದಿಯನ್ನು ಕರೆದುಕೊಂಡು ಬಂದು ದುರಸ್ತಿ ಮಾಡುವಷ್ಟರಲ್ಲಿ ಕತ್ತಲಾಗಿತ್ತು. ಬಾಳಿಗ ಎಲೆಕ್ಟ್ರಿಕಲ್ಸ್‌ನ ಸಿಬ್ಬಂದಿಗೆ ಮನೆಗಳ ವಿದ್ಯುದ್ದೀಕರಣದ ಬಗ್ಗೆ ಮಾತ್ರ ಅನುಭವವಿತ್ತು. ಹಾಗಾಗಿ ಅರ್.ವೈ.ಬಿ ವಿದ್ಯುತ್ ತಂತಿಗಳ ಸಂಪರ್ಕವನ್ನು ಸಮರ್ಪಕವಾದ ರೀತಿಯಲ್ಲಿ ಮಾಡಿರಲಿಲ್ಲವಾದ್ದರಿಂದ ಎಲ್ಲಾ ಯಂತ್ರಗಳು ವಿರುದ್ಧ ದಿಕ್ಕಿನಲ್ಲಿ ಕಾರ್ಯ ನಿರ್ವಹಿಸಲಾರಂಬಿಸಿದ್ದವು. ಪಾಟ್ ಹೆಡ್ ಹಾಗೂ ಎಚ್. ಟಿ ವಿದ್ಯುತ್ ಸಂಪರ್ಕವಿದ್ದ ಕಡೆ ಏನೂ ಮಾಡುವಂತಿರಲಿಲ್ಲ ಏಕೆಂದರೆ ವಿದ್ಯುತ್ಚಕ್ತಿ ಮಂಡಲಿಯವರು ಆ ವಲಯದಲ್ಲಿ ಆಗಲೇ ವಿದ್ಯುತ್ ಹರಿಸಿ ನಮಗೆ ಕೊಟ್ಟಿದ್ದ ವಿದ್ಯುತ್ ಹರಿಯುವಿಕೆಯ ನಿಲುಗಡೆಯ ಗಡುವು ಮುಗಿದಿದೆ ಎಂದು ತೆರಳಿದ್ದರು. ಕಡೆಗೆ ನಿರ್ವಾಹವಿಲ್ಲದೆ ಕಾರ್ಖಾನೆಯ ಮುಖ್ಯ ವಿದ್ಯುತ್ ವಿತರಣಾ ಕಪಾಟಿನಲ್ಲಿ ಕಷ್ಟಪಟ್ಟು ಅರ್.ವೈ.ಬಿ ತಂತಿಯ ಸಂಪರ್ಕಗಳನ್ನು ಬದಲಾಯಿಸಿ ಸರಿಪಡಿಸಲಾಯಿತು.

ಸಮಯಕ್ಕೆ ಸರಿಯಾಗಿ ದುರಸ್ಥಿಯ ಕಾರ್ಯ ಪೂರ್ಣಗೊಂಡಿದ್ದಕ್ಕೆ, ಕಾರ್ಖಾನೆಯ ವ್ಯವಸ್ಥಾಪಕರಾದ ಶ್ರೀಯುತ ಮೆಹ್ತಾ ಎಂಬುವರು ತಮ್ಮ ಕೊಠಡಿಗೆ ನನ್ನನ್ನು ಆಹ್ವಾನಿಸಿ ಅಭಿನಂದಿಸಿದಾಗ ಇಷ್ಟೆಲ್ಲಾ ಪಟ್ಟ ಕಷ್ಟಕ್ಕೆ ತೃಪ್ತಿ ಎನಿಸಿತ್ತು. ಕೆ.ಬಿ.ಬಿ.ಸಿ ಕಾರ್ಖಾನೆಯಲ್ಲಿ ಮೂರು ಪಾಳಿಯಲ್ಲಿ ಕೆಲಸ ಸಾಗುತಿತ್ತು(?) ಮಧ್ಯಾಹ್ನದ ಪಾಳಿ ಹೊರತು ಪಡಿಸಿ, ಮೊದಲನೇ ಪಾಳಿ ಮತ್ತು ರಾತ್ರಿಯ ಪಾಳಿಗೆ ಹಾಜರಾಗಲು ಬೇಜಾರಾಗುತ್ತಿರಲಿಲ್ಲ. ಮಧ್ಯಾಹ್ನ ಒಂದೂವರೆ ಘಂಟೆಗೆ ಮನೇಲಿ ಊಟ ಮುಗಿಸಿ ಕಾಲ್ನಡಿಗೆಯಲ್ಲಿ ರಾಮಲಿಂಗೇಶ್ವರ ಸ್ವಾಮಿ ದೇವಸ್ಥಾನದ ಸಮೀಪ ತಲುಪಿ ಕಾರ್ಖಾನೆಯ ವಾಹನಕ್ಕೆ ಕಾಯಬೇಕಿತ್ತು. ಹಾಗೆ ಕಾಯುವ ವೇಳೆಯಲ್ಲಿ ಪ್ರತೀದಿನ ವಾಹನ ಬರದಿರಲೆಂದು ಮನಸ್ಸು ಬಯಸುತ್ತಿತ್ತು. ಆದರೆ, ವಾಹನ ತಪ್ಪದೇ ಹಾಜರ್! ಒಲ್ಲದ ಮನಸ್ಸಿನಿಂದಲೇ ವಾಹನದಲ್ಲಿ ಕುಳಿತು ಪ್ರಯಾಣ ಆರಂಭಿಸಿ ಇನ್ನೇನು ಒಳ್ಳೆ ಜೋಂಪು ಹತ್ತಿತು ಎನ್ನುವಷ್ಟರಲ್ಲಿ ವಾಹನ ಕಾರ್ಖಾನೆಯ ಬಳಿ ನಿಂತಿರುತ್ತಿತ್ತು. ಈ ಬವಣೆ ಮುಗಿಯುವುದೆಂದು?

ಒಂದು ದಿನ ಕಿರ್ಲೋಸ್ಕರ್‌ನಲ್ಲಿನ ನನ್ನ ಮಾಜಿ ಸಹೋದ್ಯೋಗಿಯಾದ ಮುಕುಂದ ಎಂಬುವನು ನಮ್ಮ ಮನೆಗೆ ಬಂದು  ಮೋಹನ, ನಾಳೆ ನೀನು ಎಂ.ಆರ್. ಶ್ರೀಧರ್, ಕಿರ್ಲೋಸ್ಕರ್ ಕಾರ್ಖಾನೆಯಲ್ಲಿನ ನನ್ನ ಮಾಜಿ ವಿಭಾಗಾಧಿಕಾರಿಯನ್ನು ಭೇಟಿಯಾಗಬೇಕಂತೆ  ಎಂದನು. ಕಾರಣ ಕೇಳಿದ್ದಕ್ಕೆ ತನಗೇನು ತಿಳಿಯದು ಎಂದನು. ಸರಿ, ಮಾರನೇ ದಿನ ಬೆಳಿಗ್ಗೆ ಹೇಳಿದ್ದ ಸಮಯಕ್ಕೆ ಸರಿಯಾಗಿ ಕಿರ್ಲೋಸ್ಕರ್ ಕಾರ್ಖಾನೆಯನ್ನು ತಲುಪಿದೆ. ಶ್ರೀಯುತ ಎಂ.ಆರ್. ಶ್ರೀಧರ್‌ರವರು ನನ್ನನ್ನು ತಮ್ಮ ಬಳಿಗೆ ಬರಮಾಡಿಕೊಂಡು  ಸೀದಾ ಹೋಗಿ ತರಬೇತಿ ವಿಭಾಗಾಧಿಕಾರಿಗಳಾದ ಮುತ್ತಣ್ಣನವರನ್ನು ಭೇಟಿ ಮಾಡೆಂದರು. ಶ್ರೀಯುತ ಮುತ್ತಣ್ಣನವರೆಂದರು, "ನಮ್ಮಲ್ಲಿ ನೂತನವಾಗಿ ಆರಂಭವಾಗಿರುವ ಕಂಪ್ಯೂಟರ್ ವಿಭಾಗಕ್ಕೆ ಅಭ್ಯರ್ಥಿಗಳ ಸಂದರ್ಶನ ನಡೆಯುತ್ತಿದೆ, ನೇರವಾಗಿ ಆ ವಿಭಾಗದಲ್ಲಿ ರಮೇಶ್ ಮುತ್ತೂರ್ ಎಂಬುವರನ್ನು ಕಾಣು, ಮಾತುಕತೆಯಾದ ನಂತರ ತಲೆ ತಗ್ಗಿಸಿಕೊಡು ಆಚೀಚೆ ನೋಡದೆ, ಯಾರಲ್ಲೂ ಮಾತನಾಡದೆ ಕಂಪೆನಿಯಿಂದ ಹೊರಗೆ ಹೋಗಿ ಬಿಡು!"

ಶ್ರೀಯುತ ರಮೇಶ್ ಮುತ್ತೂರ್‌ರವರು ತಮ್ಮ ಪ್ರಶ್ನಾವಳಿ ಮುಗಿದ ಬಳಿಕ ಕಂಪ್ಯುಟರ್ ವಿಭಾಗದ ಮುಖ್ಯಸ್ಥರಾಗಿದ್ದ ವಿದ್ಯಾಸಾಗರ್ ಎಂಬುವರ ಬಳಿಗೆ ಕರೆದೊಯ್ದರು. ಶ್ರೀಯುತ ವಿದ್ಯಾಸಾಗರ್, ಸಂದರ್ಶನದ ಮುಕ್ತಾಯ ಹಂತದಲ್ಲಿ ನಿಮ್ಮ ಓದು, ಅನುಭವ ತಾಂತ್ರಿಕ ವರ್ಗದ್ದು, ನಮ್ಮಲ್ಲಿರುವ ಕೆಲಸ ತದ್ವಿರುದ್ಧವಾದದ್ದು, ಚಿಂತನೆ ಮಾಡಿ ತಿಳಿಸಿ ಎಂದರು! ನಾನು ಅವರಿಗೆ ಸದ್ಯದ ಕೆಲಸದಲ್ಲಿನ ಪರಿಸ್ಥಿತಿ ವಿವರಿಸಿ, ಯಾವ ಕೆಲಸವಾದರೂ ಪರ್ವಾಗಿಲ್ಲ,

ಮಾಡುತ್ತೇನೆಂದೆ. ಅದಕ್ಕವರು ಮುತ್ತಣ್ಣನವರಿಗೆ ನಮ್ಮ ತೀರ್ಮಾನ ತಿಳಿಸುತ್ತೇವೆ, ಮುಂದೆ ನೀವು ಅವರನ್ನು ವಿಚಾರಿಸಿ ಎಂದು ವಿದಾಯ ಹೇಳಿದರು. ಆದೇಶಿಸಿದ್ದಂತೆ ಯಾವುದೇ ಮಾಜಿ ಸಹೋದ್ಯೋಗಿಗಳೊಡನೆ ಮಾತಿಗೆ ಸಿಕ್ಕದೆ ಕಿರ್ಲೋಸ್ಕರ್‌ನಿಂದ ಹೊರಬಿದ್ದೆ ಬಂದ ದಾರಿಗೆ ಸುಂಕವಿಲ್ಲವೆಂಬ ಮನೋಭಾವದಲ್ಲಿ.

ಒಂದು ವಾರ ಕಳೆದ ಬಳಿಕ ನನ್ನನ್ನು ಕಂಪ್ಯೂಟರ್ ವಿಭಾಗಕ್ಕೆ ಆಯ್ಕೆ ಮಾಡಿರುವ ವಿಷಯ ತಿಳಿದು ಮಹದಾನಂದವಾಯಿತು. ಕೂಡಲೇ ಮೋಹನ್ ಕೋಲಾರ್‌ರವರ ಬಳಿಗೆ ಓಡಿದೆ, ವಿಷಯ ತಿಳಿದ ಅವರು "ಮೋಹನ್, ನೀವು ಮತ್ತೆ ಕಿರ್ಲೋಸ್ಕರ್‌ಗೆ ವಾಪಸ್ ಹೋಗುತ್ತೇನೆಂದರೆ, ಮೆಹ್ತಾ, ಒಪ್ಪಿಗೆ ಕೊಡುವುದಿಲ್ಲ. ಏಕೆಂದರೆ ನೀವು ಹಿಂದೆ, ವಿದ್ಯುತ್ ವ್ಯತ್ಯಯದ ಸಂದರ್ಭದಲ್ಲಿ ಪ್ರದರ್ಶಿಸಿದ ಕಾರ್ಯಕ್ಷಮತೆಯಿಂದ ನಿಮ್ಮ ಮೇಲೆ ಅವರಿಗೆ ಅಪಾರ ಭರವಸೆ ಇದ್ದು, ನಿಮಗೆ ಕೆಲಸದಲ್ಲಿ ಬಡ್ತಿ ಕೊಡಿಸುವ ಆಲೋಚನೆಯಲ್ಲಿದ್ದಾರೆ" ಎಂದರು. ನಾನು "ಸಾರ್, ಇಲ್ಲಿನ ಪರಿಸ್ಥಿತಿ ಗೊತ್ತಿದ್ದೂ ಹೇಗೆ ಮುಂದುವರೆಯುವುದು? ಎಂದಾಗ, ಅವರು ಬೇರೇನಾದರೂ ಸಬೂಬು ಹೇಳಿ ಮೆಹ್ತಾ ಅವರನ್ನು ಒಪ್ಪಿಸು" ಎಂದರು. ಸರಿ, ಮನೆಯಲ್ಲೇನೋ ತೊಂದರೆ ಇದೆ, ಸಂಸಾರವೆಲ್ಲಾ ಬೆಂಗಳೂರಿನಲ್ಲಿ ನೆಲೆಸುವ ಪರಿಸ್ಥಿತಿ ಬಂದಿರುವುದರಿಂದ ದಯಮಾಡಿ ನನ್ನನ್ನು ಬಿಡುಗಡೆ ಮಾಡಿ ಎಂದು ಒಪ್ಪಿಗೆ ಪಡೆದು ಎರಡೂವರೆ ತಿಂಗಳ ವನವಾಸದಿಂದ ಮುಕ್ತಿ ಪಡೆದಿದ್ದಾಯಿತು.

ನಾನು ಕಿರ್ಲೋಸ್ಕರ್ ಎಲೆಕ್ಟ್ರಿಕ್ ಕಾರ್ಖಾನೆಗೆ ಮರುದಾಖಲಾದಾಗ ಕಂಪ್ಯೂಟರ್ ವಿಭಾಗವು ಇನ್ನೂ ಶೈಶವಾವಸ್ಥೆಯಲ್ಲಿತ್ತು. ವಿಭಾಗದ ಸದಸ್ಯರೆಲ್ಲಾ ಉತ್ಪಾದನೆಗೆ ಬೇಕಾದ ಕಚ್ಚಾವಸ್ತುಗಳ ಹಾಗೂ ಉತ್ಪಾದಿಸಿದ ಉತ್ಪನ್ನಗಳ ಪರಿವೀಕ್ಷಣೆಗೆ ಬೇಕಾದ ಎಲ್ಲಾ ಉಪಕರಣಗಳ ಆಗಮನದ ನಿರೀಕ್ಷೆಯೊಂದಿಗೆ ಇಡೀ ವಿಭಾಗವನ್ನು ಸಜ್ಜುಗೊಳಿಸುವ ಕಾರ್ಯದಲ್ಲಿ ಮಗ್ನರಾಗಿದ್ದರು. ಕಂಪ್ಯೂಟರ್ ವಿಭಾಗವು ಮುಖ್ಯ ಕಾರ್ಖಾನೆಯ ಆವರಣದೊಳಗಿದ್ದರೂ, ಈ ವಿಭಾಗ ಮಾತ್ರ ತನ್ನದೇ ಆದ ರೀತಿ ರಿವಾಜಿನೊಂದಿಗೆ ಕಾರ್ಯ ನಿರ್ವಹಿಸುತ್ತಿತ್ತು. ಮೂಲತಃ ಈ ವಿಭಾಗದ ಸದಸ್ಯರಿಗೆ ಮಿಕ್ಕೆಲ್ಲಾ ವಿಭಾಗಗಳ ಸಿಬ್ಬಂದಿಯವರು ಮಲತಾಯಿ ಧೋರಣೆ ತೋರಿಸುತ್ತಿದ್ದರು. ನಾನೋ ಇತರ ವಿಭಾಗದಿಂದ ಬಂದವನಾಗಿದ್ದೆ. ಹಾಗಾಗಿ ಎರಡೂ ಬದಿಯನ್ನು ಕುಶಲತೆಯಿಂದ ನಿಭಾಯಿಸಬೇಕಿತ್ತು.

ಕಂಪ್ಯೂಟರ್ ವಿಭಾಗದಲ್ಲಿ ೨೧ ಸದಸ್ಯರಿದ್ದು ಸದಾ ಒಬ್ಬರನ್ನೊಬ್ಬರು ಆದರಿಸುತ್ತಾ ಕೆಲಸವನ್ನು ನಿರ್ವಹಿಸುತ್ತಿದ್ದ ರೀತಿ ಹರುಷ ಕೊಡುತ್ತಿತ್ತು. ಪ್ರತೀ ತಿಂಗಳಿಗೊಮ್ಮೆ ವಿಭಾಗದ ಸದಸ್ಯರೆಲ್ಲರೂ ಕೂಡಿ ಔತಣಕೂಟಗಳನ್ನು ಏರ್ಪಡಿಸಿ ತಮ್ಮ ಸಂಸಾರದ ಸದಸ್ಯರೊಂದಿಗೆ ಭಾಗವಹಿಸಿ ಹರ್ಷೋಲ್ಲಾಸ ಪಡುತ್ತಿದ್ದೆವು.

ಈ ವಿಭಾಗದ ಕಾರ್ಮಿಕ ವರ್ಗದಲ್ಲಿದ್ದ ಐದಾರು ಸದಸ್ಯರನ್ನು ಹೊರತುಪಡಿಸಿದರೆ ಮಿಕ್ಕೆಲ್ಲಾ ಸಹೋದ್ಯೋಗಿಗಳು ಸಂಭಾಷಿಸಲು ಬಳಸುತ್ತಿದ್ದದ್ದು ಆಂಗ್ಲ ಭಾಷೆಯನ್ನು. ನನಗೋ ಆಂಗ್ಲ ಭಾಷೆಯು ಕಬ್ಬಿಣದ ಕಡಲೆಯಂತಾಗಿ ಅಗಿಯಲಾಗದೆ ಮುಜುಗರದಿಂದ ಕುಗ್ಗಿ ಅವರೊಂದಿಗೆ ಅತಿ ಕನಿಷ್ಠ ಸಂಭಾಷಣೆಗಷ್ಟೇ ನನ್ನ ಮಾತುಕತೆಯನ್ನು ಸೀಮಿತಗೊಳಿಸಲು ಶತಪ್ರಯತ್ನ ನಡೆಸುತ್ತಿದ್ದೆ.

ಈ ನಡುವೆ ಕಾರ್ಖಾನೆಯು ಕೆಲವು ಸಹೋದ್ಯೋಗಿಗಳೊಂದಿಗೆ ಉನ್ನತಾಭ್ಯಾಸಕ್ಕಾಗಿ ಅವಕಾಶ ಒದಗಿ ಶ್ರೀ ಜಯಚಾಮರಾಜೇಂದ್ರ ಕಾಲೇಜ್ ಆಫ್ ಇಂಜಿನಿಯರಿಂಗ್‌ನಲ್ಲಿ ಸಂಜೆಯ ವೇಳೆಯ ತರಗತಿಗೆ ದಾಖಲಾಗಿ ಉದ್ಯೋಗ ಹಾಗೂ ವಿದ್ಯಾಭ್ಯಾಸವನ್ನು ತೂಗಿಸುತ್ತಿದ್ದೆ. ಇನ್ನು ಕಾರ್ಖಾನೆಯಲ್ಲಿ ನನ್ನ ಸೇವಾವಧಿಯು ಸಮಯದೊಂದಿಗೆ ಉರುಳುತ್ತಿದ್ದಂತೆ, ಒಂದು ಪುಟ್ಟ ಕಂಪೆನಿಯನ್ನು ಬಿತ್ತಿ, ಆರೈಕೆ ಮಾಡಿ ಬೆಳೆಸುವ ವಿಧಾನಗಳ ಪರಿಚಯವಾಗತೊಡಗಿತು.

ನಾಲ್ಕೂವರೆ ವರ್ಷ ಸದ್ದಿಲ್ಲದೆ ಸರಿದ ಮೇಲೆ ಬಂತೊಂದು ಆಘಾತದ ವಾರ್ತೆ, ಕಂಪ್ಯೂಟರ್ ವಿಭಾಗವನ್ನು ಮುಚ್ಚುವರೆಂದು!



# ಅಧ್ಯಾಯ ೫

## ಸಂಸಾರದಲ್ಲಿ ಸರಿಗಮ

ಮನೆಯಲ್ಲಿನ ಪರಿಸ್ಥಿತಿ, ತಮ್ಮಂದಿರಾದ ಚಂದ್ರ ಮತ್ತು ಗಿರೀಶ್ ತಾವು ಹೈಸ್ಕೂಲ್ ಮೆಟ್ಟಿಲು ಹತ್ತುತ್ತಿದ್ದ ಹಾಗೇ ಶಾಲೆಯ ಅವಧಿ ಮುಗಿದ ಬಳಿಕ ಸಂಜೆಯ ವೇಳೆಯಲ್ಲಿ ನಗರದ ಹೃದಯ ಭಾಗದಲ್ಲಿದ್ದ ಬಟ್ಟೆ ಅಂಗಡಿಗಳಿಗೆ ಕೆಲಸಕ್ಕೆ ಹೋಗಲಾರಂಭಿಸಿದ್ದರು. ತಂದೆಯವರೂ ಸಹ ತಮ್ಮ ಪಾಳಿಯ ಕೆಲಸ ಮುಗಿದ ಮೇಲೆ ಅವರ ಸಹೋದ್ಯೋಗಿಯಾದ ಶ್ರೀಯುತ ಕೃಷ್ಣ ಸಿಂಗ್ ಎಂಬುವರೊಂದಿಗೆ ಪಾರ್ಟ್ ಟೈಮ್ ಕೆಲಸ ಮಾಡಲು ಆರಂಭಿಸಿದ್ದರು. ನಾಲ್ಕೂ ಜನರ ಒಟ್ಟು ಆದಾಯದಿಂದ ನಮ್ಮ ಸಂಸಾರದ ವೆಚ್ಚವನ್ನು ಭರಿಸಲು ಸಾಧ್ಯವಾಗಿರಲಿಲ್ಲ. ತಂದೆಯವರ ಕಾಳಿಯ ಬೋಳಿ ಮಾಡುವ, ಬೋಳಿಯ ಕಾಳಿ ಮಾಡುವ ಕಾರ್ಯ ನಿರಂತರವಾಗಿ ಸಾಗಿತ್ತು. ಎಲ್ಲಿಯ ತನಕ ಇದು ಸಾಧ್ಯ?

ಸಾಲ ಕೊಡುವವರೆಲ್ಲಾ ಕೊಟ್ಟಿದ್ದಾಗಿತ್ತು, ಮತ್ಯಾರು ಉಳಿದಿರಲಿಲ್ಲ, ಎಲ್ಲದಕ್ಕೂ ಒಂದು ಮಿತಿ ಇರುವ ಹಾಗೇ ಮುಂದೆ ಈ ಆಟ ನಡೆಯದಂತಾಯಿತು! ಸಾಲ ಕೊಟ್ಟವರೆಲ್ಲಾ ಒಮ್ಮೆಲೇ ತಂದೆಯವರ ಮೇಲೆ ಘೇರಾಯಿಸಿದರು. ಆಗ ತಂದೆಯವರ ಸಹೋದ್ಯೋಗಿಗಳೂ ಹಾಗೂ ಹಿತೈಶಿಗಳಾದ ಸಿಂಗ್ ಮತ್ತು ಸ್ವಾಮಿ ಎನ್ನುವವರು ಮಧ್ಯಸ್ತಿಕೆ ವಹಿಸಿ, ಮಾತುಕತೆಗೆ ಸಾಲ ಕೊಟ್ಟವರನ್ನೆಲ್ಲಾ ನಮ್ಮ ಮನೆಗೆ ಬರ ಮಾಡಿಕೊಂಡು ಮನೆಯ ಸದ್ಯದ ಆದಾಯ ಮತ್ತು ವೆಚ್ಚದ ಪರಿಸ್ಥಿತಿಯನ್ನು ವಿಶದವಾಗಿ ವಿವರಿಸಿ, ಇನ್ನು ಮುಂದೆ ಯಾರಿಗೂ ಬಡ್ಡಿ ಕೊಡಲು ಸಾಧ್ಯವಿಲ್ಲ. ಈಗಾಗಲೇ ಅಸಲಿಗಿಂತ ಹೆಚ್ಚಾಗಿ ಬಡ್ಡೀ ಕೊಟ್ಟಿದ್ದಾನೆ ಶಂಕ್ರಣ್ಣ. ಎಲ್ಲಾ ಸಾಲವನ್ನು ಕಂತಿಗೆ ಪರಿವರ್ತಿಸಿದರೆ, ನಿಮ್ಮ ಹಣ ನಿಧಾನವಾಗಿಯಾದರೂ ನಿಮ್ಮ ಕೈ ಸೇರುವುದು ಇಲ್ಲದಿದ್ದರೆ, ಹಣವೂ ಇಲ್ಲ, ಶಂಕ್ರಣ್ಣನೂ ಇಲ್ಲಾ ಎಂಬಂತಾಗುವುದು, ಚೆನ್ನಾಗಿ ಯೋಚಿಸಿ ಎಂದು ಕಡ್ಡೀ ಎರಡು ತುಂಡು ಮಾಡಿದಂತೆ

ಹೇಳಿದರು. ತದನಂತರ ಸಾಲ ಕೊಟ್ಟವರೆಲ್ಲಾ, ತಮ್ಮಲ್ಲೇ ಚರ್ಚಿಸಿ ಸಾಲವನ್ನು ಕಂತಿಗೆ ಪರಿವರ್ತಿಸಲು ಒಪ್ಪಿಗೆ ಕೊಟ್ಟರು. ನಂತರ ಅವರೇ ನಿರ್ಧರಿಸಿದ್ದರು, ಯಾರ ಸಾಲ ತೀರಿದ ಬಳಿಕ ಯಾರಿಗೆ ಎಂದು!

ಬಂದವರೆಲ್ಲಾ ಹೋದ ಮೇಲೆ ನಾವು ಮನೆಯವರು ಒಟ್ಟಿಗೆ ಒಂದು ನಿರ್ಧಾರಕ್ಕೆ ಬಂದೆವು. ತಂದೆಯವರು ಇನ್ನು ಮೇಲೆ ಎಲ್ಲೂ ಸಾಲ ಮಾಡುವ ಹಾಗಿಲ್ಲಾ, ಯಾರೂ ಕೊಡುವುದಿಲ್ಲ ಅದು ಬೇರೇ ವಿಷಯ. ಏನಿದೆಯೋ ಅದನ್ನು ತಿನ್ನೋಣ, ಇಲ್ಲದಿದ್ದರೆ ತಣ್ಣೀರು ಬಟ್ಟೆ ಹೊಟ್ಟೆ ಮೇಲೆ ಹಾಕಿಕೊಂಡು ಇರೋಣ.

ವರ್ಷಗಳುರುಳುತ್ತಿದ್ದವು.. ಸಾಲ ಪಡೆದುಕೊಂಡು ಆಗಿದ್ದ ಭಾರಿ ಆಘಾತದಿಂದ ಚೇತರಿಸಿಕೊಳ್ಳುತ್ತಿದ್ದರೂ ಅದರ ಹಿಡಿತದಿಂದ ತಪ್ಪಿಸಿಕೊಳ್ಳಲಾಗದೆ ಪ್ರತಿ ತಿಂಗಳ ಕೊನೆಯಲ್ಲಿ ಅಷ್ಟಿಷ್ಟು ಕೈಸಾಲ ಮಾಡುವುದು, ಮುಂದಿನ ತಿಂಗಳ ಸಂಬಳದಲ್ಲಿ ತೀರಿಸುವುದು ನಡೆದಿತ್ತು. ಈ ಪರಿಪಾಠಕ್ಕೆ ಕೊನೆ ಎಂದು?

ನಾನು ಎಸ್.ಎಸ್.ಎಲ್.ಸಿ ಯನ್ನು ೧೯೮೦ ರಲ್ಲಿ ಮುಗಿಸಿದ ಕೂಡಲೇ ನಮ್ಮ ತಾತನವರು, ಅಮ್ಮನ ಅಪ್ಪ, ನನ್ನ ಮದುವೆಯ ಪ್ರಸ್ತಾಪ ಮಾಡಲು ಆರಂಭಿಸಿದ್ದರು. ಅವರಿಗೊಂದಾಸೆ, ನನ್ನ ಮದುವೆ ಮಾಡಿ ಮೊಮ್ಮಗನನ್ನು ನೋಡಿ ತಾನು ಕಣ್ಮುಚ್ಚಬೇಕೆಂದು! ನನಗೋ ಒಂದೇ ಧ್ಯೇಯ! ನಮ್ಮ ಕಾಲ ಮೇಲೆ ನಾವು ನಿಲ್ಲುವಂತಾದ ಮೇಲೆ ಮದುವೆ ಗಿದುವೆ ಎಲ್ಲಾ. ಪ್ರತೀವರ್ಷ ಬಂಧುಗಳ ಮನೆಯವರ ಮದುವೆಯ ಕಾರಣಕ್ಕೆ ಊರಿಗೆ ಹೋದರಂತೂ ನನಗೆ ಹೆಣ್ಣನ್ನು ತೋರಿಸುವ ಶಾಸ್ತ್ರ ತಪ್ಪುತ್ತಿರಲಿಲ್ಲ! ಇದರಿಂದ ಬೇಸತ್ತು ಊರಿಗೆ ಹೋಗುವುದನ್ನೇ ತಪ್ಪಿಸಿಕೊಳ್ಳುತ್ತಿದ್ದೆ. ಆದರೂ ಅಸಂಖ್ಯಾತ ವ್ಯರ್ಥ ಪ್ರಯತ್ನಗಳಂತೂ ತಾತನವರಿಂದ ನಡೆಯುತ್ತಿತ್ತು. ಸಾಲದ ಹಣವನ್ನು ಮರು ಪಾವತಿ ಮಾಡಿ ಮುಕ್ತಿ ಪಡೆಯಲು ತಂದೆಯವರಿಗೆ ಒಂದು ಉಪಾಯ ಹೊಳೆಯಿತು. ವರದಕ್ಷಿಣೆ ಪಡೆದು ಮಗನ ಮದುವೆ ಮಾಡಿ ಎಲ್ಲಾ ಸಾಲವನ್ನು ತೀರಿಸಿ ನೆಮ್ಮದಿಯಿಂದಿರಬಹುದಲ್ಲಾ ಎಂದು. ನನ್ನ ವಾದ ಒಂದೇ ವರದಕ್ಷಿಣೆ ಕೊಟ್ಟು ಮದುವೆ ಮಾಡಿಕೊಡುವ ಮನೆಯವರ ಅಪೇಕ್ಷೆ ಏನಿರುತ್ತೆ? ತಮ್ಮ ಮಗಳು ಅಳಿಯ ಮಾತ್ರ ಚೆನ್ನಾಗಿರಬೇಕೆನ್ನುವುದಲ್ಲದೇ? ವರದಕ್ಷಿಣೆಯ ಹಣದಲ್ಲಿ ಈಗಿರುವ ಸಾಲವನ್ನೇನೋ ತೀರಿಸಬಹುದು, ಆದರೆ ತುಂಬಿದ ಸಂಸಾರ ಎಳೆಯಲು ಮಾವನ ಮನೆಯವರು ಬಿಡಬೇಕಲ್ಲಾ? ಅಕಸ್ಮಾತ್ ಬಿಟ್ಟರೂ ಮತ್ತದೇ ಸುಳಿಯಲ್ಲಿ ಸಿಲುಕುವುದು ಶತಸಿದ್ಧ. ಅಗ್ನಿ ಸಮಾನವಾದ ಆ ಧನದ ಹಂಗಿನಲ್ಲಿದ್ದರೆ ನಮ್ಮತನವು ದಹಿಸಿ ತರುವಾಯ ಉಳಿಯುವುದೇನು? ಹಂಗಿನರಮನೆಯಲ್ಲಿನ ಸೆರೆವಾಸವಲ್ಲದೇ? ಈ ದ್ವಂದ್ವತೆಯ ವಾಗ್ವಾದದ

ಪರಿಣಾಮವಾದ ನನ್ನ ನಿರ್ಧಾರ ಮನೆಯಲ್ಲಿನ ಶಾಂತಿ ಕದಡಲು ಶಕ್ತವಾಗಿತ್ತಲ್ಲದೇ ನನ್ನನ್ನು ಮನೆಯವರ ಎದುರಿನಲ್ಲಿ ಖಳನಾಯಕನಂತಾಗಿಸಿತ್ತು.

ಇಸವಿ ೧೯೯೧, ನಮ್ಮ ದೊಡ್ಡ ಅತ್ತೆಯವರು ಸಂಸಾರ ಸಾಗರದಿಂದ ದೂರವಾದ ಮೇಲೆ ಆ ಮನೆಯಲ್ಲಿ ಹೆಣ್ಣು ದಿಕ್ಕಿಲ್ಲದೇ ಪರದಾಡುವ ಸ್ಥಿತಿ ಉದ್ಭವಿಸಿದಾಗ, ದೊಡ್ಡ ಮಾವನವರು ನನ್ನ ಮೊದಲನೇ ತಂಗಿಯಾದ ದಾಕ್ಷಾಯಿಣಿಯನ್ನು ಅವರ ಸೊಸೆಯನ್ನಾಗಿಸಿಕೊಳ್ಳುವ ಪ್ರಸ್ತಾಪವನ್ನು ಅಪ್ಪ ಅಮ್ಮನವರ ಮುಂದಿಟ್ಟರು. ಮನೆಯವರೆಲ್ಲಾ ಸೇರಿ ಮೀನಾ ಮೇಷ ಎಣಿಸಿ, ಮನೆಯ ಪರಿಸ್ಥಿತಿಯನ್ನು ಒರೆ ಹಚ್ಚಿ, ವಾಸ್ತವಿಕತೆಯನ್ನು ಮನಗಂಡು ತವರು ಮನೆಯ ಸಂಬಂಧಕ್ಕೆ ಒಪ್ಪಿಗೆ ಸೂಚಿಸಿದೆವು. ಗಂಡಿನ ಮನೆಯವರೇ ಎರಡೂ ಕಡೆಯ ಮದುವೆಯ ಖರ್ಚನ್ನು ಭರಿಸಿದ್ದರು. ತಂಗಿಯ ಮದುವೆ ಮುಗಿದು ಒಂದಾರು ತಿಂಗಳಾದ ಬಳಿಕ ಮನೆಯ ಆಯ ವ್ಯಯವನ್ನು ಪರಿಗಣಿಸಿ, ನಾವು ಬಾಡಿಗೆಗೆ ಇದ್ದ ವೆಂಕಟಪ್ಪನವರ ಮನೆಯನ್ನು ತ್ಯಜಿಸಿ ರಾಮಕೃಷ್ಣ ನಗರದಲ್ಲಿನ ಎರಡು ಕೋಣೆಗಳುಳ್ಳ ಬಾಡಿಗೆ ಮನೆಗೆ ಹೋಗುವ ನಿರ್ಧಾರ ಕೈಗೊಂಡೆವು. ಈ ನಿರ್ಧಾರಕ್ಕೆ ಮುಖ್ಯ ಕಾರಣ ವಠಾರದಲ್ಲಿನ ಅತಿಯಾದ ನೆರೆ ಹೊರೆಯವರ ಗಲಭೆ, ಮನಸ್ತಾಪ, ಜಗಳ. ಇದನ್ನೆಲ್ಲಾ ಸಹಿಸಿಕೊಂಡು ತೂಗಿಸುತ್ತಿದ್ದ ಅಮ್ಮನಿಗೆ ಸಾಕಾಗಿ ಪದೇ ಪದೇ ಮನೆ ಬದಲಾಯಿಸಲು ಒತ್ತಾಯಿಸುತ್ತಿದ್ದದ್ದು. ಹೊಸ ಮನೆಯಲ್ಲಿ ವಾಸ ಮಾಡಲಾರಂಭಿಸಿದ ಮೇಲೆ ನಮಗೆಲ್ಲಾ ಆಗಾಗ್ಗೆ ತಂಗಿಯ ನೆನಪಾಗುತ್ತಿತ್ತು, ಇಂಥಾ ಮನೆಯಲ್ಲಿರುವಾಗ ಜೊತೆಯಲ್ಲಿ ಅವಳಿಲ್ಲವಲ್ಲಾ ಎಂದೆನಿಸಿ ಮನಸ್ಸಿಗೆ ನೋವಾಗುತ್ತಿತ್ತು. ಇನ್ನು ಅಳಿಯನಾದ ಚಂದ್ರನು ಸಂಭಾವಿತ ವ್ಯಕ್ತಿ, ಕಷ್ಟಪಟ್ಟು ತನ್ನ ಜೀವನ ರೂಪಿಸಿಕೊಂಡು ನಾಲ್ಕು ಜನಕ್ಕೆ ಬೇಕೆನಿಸುವಂತೆ ಗೌರವವನ್ನು ಸಂಪಾದಿಸಿ, ಸದಾ ಏರು ಪೇರುಗಳಿರುವ ಮಗ್ಗದ ವ್ಯವಹಾರದಲ್ಲಿ ತನ್ನದೇ ಆದ ರೀತಿಯಲ್ಲಿ ವ್ಯಾಪಾರ ನಡೆಸಿ ಯಶಸ್ವಿಯಾಗಿ ಬದುಕನ್ನು ನಡೆಸುವಷ್ಟರ ಮಟ್ಟಿಗೆ ಬೆಳೆದಿದ್ದಾನೆ.

ಪುನಃ ಆರಂಭವಾಯಿತು ನಮ್ಮ ತಾತನವರ ಛಲ ಬಿಡದ ತ್ರಿವಿಕ್ರಮನ ಸಾಹಸ! ಇಸವಿ ೧೯೯೩ ನಾನು ನನ್ನ ಸ್ನೇಹಿತರೊಡಗೂಡಿ ಗೆಳೆಯ ನಂದಕುಮಾರನ ಅಕ್ಕನ ಮದುವೆಗೆಂದು ಕಾಸರಗೋಡಿಗೆ ಹೊರಡುವ ತಯಾರಿಯಲ್ಲಿದ್ದೆ. ಬಸ್ ಟಿಕೆಟ್‌ಗಳನ್ನು ಕಾದಿರಿಸಲಾಗಿತ್ತು. ಹೊರಡುವ ಹಿಂದಿನ ರಾತ್ರಿ ತಾತನವರಿಂದ ಬುಲಾವ್ ಬಂದಿತ್ತು ಬೆಂಗಳೂರಿನಲ್ಲಿ ಒಂದು ಹೆಣ್ಣನ್ನು ನೋಡಲು. ನನಗೋ ಸಿಟ್ಟು ನೆತ್ತಿಗೇರಿತ್ತು, ನಾನು ಸ್ನೇಹಿತನ ಅಕ್ಕನ ಮದುವೆಗೆ ಹೋಗಬೇಕು ಹೆಣ್ಣನ್ನು ನೋಡಲು ಹೋಗುವುದು ಬೇಡ ಎಂದೆ. ಅಪ್ಪ ಅಮ್ಮನವರು ಒಟ್ಟಿಗೆ ರೇಗಿ,

ಅವರೆಲ್ಲಾ ಅಷ್ಟೊಂದು ಮುತುವರ್ಜಿಯಿಂದ ಸಂಬಂಧ ಹುಡುಕಿ ತಂದರೆ, ನಿರಾಕರಿಸುವುದು ಸರಿಯಲ್ಲ, ಹೋಗಿ ನೋಡು ಇಷ್ಟವಾಗದಿದ್ದರೆ ಬೇಡ ಎಂದರು. ಮಾರನೆಯ ದಿನ ಮುಂಜಾನೆ ಒಲ್ಲದ ಮನಸ್ಸಿನಲ್ಲಿ ಮುಖಕ್ಷೌರ ಕೂಡ ಮಾಡದೆ, ಗಾಢನೀಲಿಯ ಅಂಗಿ ಧರಿಸಿ, ಹೆಣ್ಣು ಹಾಗು ಹೆಣ್ಣಿನ ಮನೆಯವರು ನನ್ನನ್ನು ನಿರಾಕರಿಸಲಿ ಎಂದುಕೊಂಡು ಮುಖ ದಪ್ಪ ಮಾಡಿಕೊಂಡು ತಂದೆಯವರ ಜೊತೆಗೆ ಹೊರಟೆ.

ಬೆಂಗಳೂರು ಬಸ್ ನಿಲ್ದಾಣ ತಲುಪುವಾಗ್ಗೆ ಸಮಯ ೧೦–೦೦ ಘಂಟೆಯಾಗಿತ್ತು. ಅಲ್ಲಿ ನಮ್ಮ ತಾತನವರ ಜೊತೆಗೆ ಹೆಣ್ಣಿನ ತಾತನವರು, ಸಂಬಂಧದ ಮಧ್ಯಸ್ತಿಕೆ ವಹಿಸಿಕೊಂಡಿದ್ದ ಶ್ರೀಯುತ ಗೋವಿಂದಪ್ಪನವರು ಹಾಗೂ ನಮ್ಮ ಅಳಿಯ ಚಂದ್ರ ನಮ್ಮ ಬರುವಿಕೆಗಾಗಿ ಕಾದಿದ್ದರು. ಉಭಯಕುಶಲೋಪರಿ ಆದ ಮೇಲೆ ಎಲ್ಲರೂ ಬಸ್ ಹಿಡಿದು ಬಸವೇಶ್ವರನಗರವನ್ನು ತಲುಪಿದೆವು. ಕಡೆಯ ನಿಲ್ದಾಣದಲ್ಲಿ ಬಸ್‌ನಿಂದ ಇಳಿದು ಹೆಣ್ಣಿನ ಮನೆಯನ್ನು ಅರಸುತ್ತಾ ಹೆಣ್ಣಿನ ತಾತನವರನ್ನು ಹಿಂಬಾಲಿಸುತ್ತಾ ಕಾಲ್ನಡಿಗೆಯಲ್ಲಿ ಹೊರಟೆವು. ನಾನು ದಾರಿಯುದ್ದಕ್ಕೂ ಅಕ್ಕಪಕ್ಕಗಳಲ್ಲಿದ್ದ ಸಣ್ಣ ಪುಟ್ಟ ಮನೆಗಳನ್ನು ಕಂಡು ಇಲ್ಲೆಲ್ಲೋ ಇರಬೇಕು ಹೆಣ್ಣಿನ ಮನೆ ಎಂದುಕೊಂಡರೆ ಇಲ್ಲಾ ಅವರೆಲ್ಲಾ ಮುಂದೆ ಸಾಗುತ್ತಲೇ ಇದ್ದರು. ಕಡೆಗೆ ಮೂರು ಅಂತಸ್ತಿನ ಭವ್ಯ ಮನೆಯ ಮುಂದೆ ನಿಂತಾಗ ಯಾಕೋ ಏನೋ ಸರಿಯಾಗ್ತಾ ಇಲ್ಲ ಎನ್ನಿಸತೊಡಗಿತು ಮನಸ್ಸಿನಲ್ಲಿ. ಎಲ್ಲರೂ ಮನೆಯೊಳಗೆ ಹೊಕ್ಕು ಪರಸ್ಪರ ಪರಿಚಯವಾಗಿ ಆಸೀನರಾದೆವು. ನನಗೆ ಕಂಡದ್ದು ಹೆಣ್ಣಿನ ತಾಯಿ, ಸೋದರತ್ತೆ ಹಾಗು ತಮ್ಮ. ಸ್ವಲ್ಪ ಸಮಯದ ನಂತರ ಎಲ್ಲರಿಗೂ ಹೆಣ್ಣಿನ ಮುಖೇನ ಪಾನಕ ಮತ್ತು ಕುರುಕಲು ತಿಂಡಿ ವಿತರಿಸುತ್ತಿದ್ದಾಗ ನನ್ನ ಕಿವಿಯಲ್ಲಿ ಗುಂಯ್ಗುಡುತ್ತಿದ್ದದ್ದು ನಮ್ಮ ಚಿಕ್ಕಪ್ಪನವರ ಕಿವಿಮಾತುಗಳು "ಮೋಹನ್, ಹೆಣ್ಣನ್ನು ನೋಡಲು ಹೋದಾಗ ಬರೀ ಮುಖದ ಕಡೆ ಗಮನ ಕೊಡಬೇಡ, ಏಕೆಂದರೆ ಮುಖಕ್ಕೆ ಸಿಂಗಾರ ಮಾಡಿರುವುದರಿಂದ ನಿಜವಾದ ಬಣ್ಣ ತಿಳಿಯುವುದಿಲ್ಲ, ಯಾವಾಗಲು ಹೆಣ್ಣಿನ ಕೈ ಹಾಗು ಪಾದಗಳನ್ನು ಗಮನಿಸು." ನಾನು ಹೆಣ್ಣಿನ ಪಾದಗಳನ್ನು ನೋಡೋಣವೆಂದರೆ ಉಟ್ಟಿದ್ದ ಸೀರೆ ಎರಡೂ ಪಾದಗಳನ್ನು ಸಂಪೂರ್ಣವಾಗಿ ಮುಚ್ಚಿತ್ತು! ಇನ್ನು ಕೈಗಳನ್ನು ಗಮನಿಸೋಣವೆಂದರೆ ಭಯ, ಕೈ ನೋಡುವ ಕಾತುರದಲ್ಲಿ, ಕೊಡುತ್ತಿರುವ ತಿಂಡಿ ತೀರ್ಥ ಚೆಲ್ಲಿದರೆ?

ಮಾತುಕತೆ ಮುಂದುವರೆದಂತೆ ಹೆಣ್ಣಿನ ಮನೆಯವರ ಬಗ್ಗೆ ತಿಳಿದ ಮಾಹಿತಿ, ತಂದೆಯಿಲ್ಲದ ಸಂಸಾರ, ಹೆಣ್ಣಿಗೆ ಒಬ್ಬ ಅಕ್ಕ ಹಾಗು ಇಬ್ಬರು ತಮ್ಮಂದಿರು, ತಾಯಿಯೇ ಸಂಸಾರದ ಎಲ್ಲ ಜವಾಬ್ದಾರಿಯನ್ನು ಹೊತ್ತು ನಿಭಾಯಿಸುತ್ತಿದ್ದರು. ಆಕೆಗೆ ತೆರೆದ ಹೃದಯ ಶಸ್ತ್ರಚಿಕಿತ್ಸೆಯಾಗಿತ್ತಲ್ಲದೆ ಆಸ್ಥಮ ಕೂಡ ತನ್ನ ಪ್ರಭಾವ ಬೀರಿತ್ತು. ಆ

ತಾಯಿಯ ವದನದಲ್ಲಿ ದೈನ್ಯತೆಯೇ ಮೂರ್ತಿವೆತ್ತಂತಿದ್ದು ನೋಡಿದವರಿಗೆ, ಪ್ರಥಮ ದರ್ಶನದಲ್ಲೇ ಗೌರವ ಭಾವನೆಯನ್ನು ಅರಳಿಸುತ್ತಿತ್ತು. ತಂದೆ ಇಲ್ಲದ ಸಂಸಾರವನ್ನು ಊಹಿಸಲಾಗದೆ ಮನ ಕಲಕಿತ್ತು. ನನಗನ್ನಿಸಿದ್ದಿಷ್ಟು "ತಂದೆಯಿಲ್ಲದ ಹುಡುಗಿ, ನಮ್ಮ ಮನೆಗೆ ಬಂದರೆ ತಂದೆಯ ವಾತ್ಸಲ್ಯ ದೊರಕುವುದು, ನಮ್ಮ ಅಮ್ಮನವರಿಗೆ ಮನೆಗೆಲಸ ತೂಗಿಸಲು ಸಹಾಯಕ್ಕಿರುವಳು" ಪಾನಕದ ಜೊತೆ ಕೊಟ್ಟಿದ್ದ ಕುರುಕಲು ಮೆಲುಕು ಹಾಕುತ್ತಿದ್ದಾಗ, ತಾತನವರು ಬಾ ಮೋಹನ್ ಎಂದು ಮನೆಯಿಂದ ಹೊರಕ್ಕೆ ನಡೆದರು, ಹಿಂಬಾಲಿಸಿದೆ, ಹೆಣ್ಣಿನ ಮನೆಯ ಹಿಂದೆ ಇದ್ದ ಆಟದ ಮೈದಾನಕ್ಕೆ ಪ್ರದಕ್ಷಿಣೆ ಹಾಕುತ್ತಾ ತಾತನವರು ಪ್ರಶ್ನಿಸಿದರು "ಏನು ನಿನ್ನ ಅಭಿಪ್ರಾಯ?" ನನ್ನ ಉತ್ತರ "ಹೆಣ್ಣು ನನಗೆ ಒಪ್ಪಿಗೆ".

ಸತತ ಹನ್ನೆರಡು ವರ್ಷಗಳಿಂದ ಅವರು ಎದುರು ನೋಡುತ್ತಿದ್ದ ಉತ್ತರ! ನಂಬಲಿಕ್ಕಾಗದೆ, "ಮೋಹನ್, ಇದು ಬಲು ಗಹನವಾದ ವಿಚಾರ, ಇಲ್ಲಿ ನಮ್ಮೆದುರಿಗೆ ಒತ್ತಡಕ್ಕೆ ಮಣಿದು ಒಪ್ಪಿ, ಮೈಸೂರಿಗೆ ಹೋದಮೇಲೆ ಬೇಡ ಎಂದರೆ, ನಾವೆಲ್ಲಾ ಊರಿನಲ್ಲಿ ತಲೆ ಎತ್ತಿ ಓಡಾಡಲು ಸಾಧ್ಯವಿಲ್ಲ, ಚೆನ್ನಾಗಿ ಯೋಚಿಸಿ ನಿರ್ಧಾರ ಮಾಡು" ಎಂದರು. "ನಿಮ್ಮನ್ನು ಹೇಗೆ ನಂಬಿಸುವುದೋ ನನಗೆ ಗೊತ್ತಾಗುತ್ತಿಲ್ಲ, ಬೇಕಾದರೆ ಈಗಲೇ ಯಾವುದಾದರೂ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ, ನಾನು ತಾಳಿ ಕಟ್ಟಲು ಸಿದ್ಧ"ನೆಂದೆ. ಅದಕ್ಕವರು ಸಂತೋಷದಿಂದ, ಆಯಿತು, ಮಿಕ್ಕದ್ದನ್ನೆಲ್ಲಾ ನಮಗೆ ಬಿಡು ಎಂದರು. ಪ್ರತಿಯಾಗಿ ನಾನು ಸರಳ ವಿವಾಹ ಮಾಡಿಕೊಳ್ಳೋಣವೆನ್ನುತ್ತಿದ್ದ ಹಾಗೇ ನಿನ್ನ ಜವಾಬ್ದಾರಿಯೇನಿದ್ದರೂ ಹುಡುಗಿಯ ಬಗ್ಗೆ ಒಪ್ಪಿಗೆ ಸೂಚಿಸುವುದಷ್ಟೆ, ಮುಂದೆ ಮದುವೆ ಕಾರ್ಯವನ್ನು ಹೇಗೆ ನಿಭಾಯಿಸಬೇಕು ಎನ್ನುವುದನ್ನು ನಾವು ಹಿರಿಯರೆಲ್ಲಾ ಸೇರಿ ತೀರ್ಮಾನ ಮಾಡುತ್ತೇವೆ ಎನ್ನುತ್ತಾ ಹಿಂದಿರುಗಲು ಅನುವಾದರು. ಮಾತು ಬೆಳೆಸಿದರೆ ಏನೂ ಉಪಯೋಗವಿಲ್ಲವೆನಿಸಿ ತಾತನವರನ್ನು ಅನುಸರಿಸುತ್ತಾ ದಾರಿಯಲ್ಲಿ, ನಾನು ಹುಡುಗಿಯೊಂದಿಗೆ ಮಾತನಾಡಬೇಕೆಂಬ ಅಪೇಕ್ಷೆ ವ್ಯಕ್ತಪಡಿಸಿದಾಗ ಅದಕ್ಕೇನಂತೆ, ಹುಡುಗಿಯ ಮನೆಯವರಿಗೆ ಹೇಳೋಣ ಎಂದರು.

ಸ್ನೇಹಿತರಲ್ಲಿ ಕೆಲವರು ಹೆಣ್ಣು ನೋಡುತ್ತಿದ್ದವರು ಹಾಗೂ ಆಗಲೇ ಮದುವೆಯಾದವರು, ತಮ್ಮ ಭಾವಿ ಪತ್ನಿಯೊಡನೆ ಮುಖಾಮುಖಿಯಾದಾಗ ಪರಸ್ಪರ ಮಾತನಾಡಿಕೊಂಡಿದ್ದನ್ನು ನಮ್ಮಲ್ಲೆಲ್ಲಾ ಹೇಳಿಕೊಂಡಿದ್ದರು. ನಾನು ಮದುವೆಯಾಗುವ ಹುಡುಗಿಯೊಡನೆ ಮಾತನಾಡಲಿಲ್ಲ ಎಂದು ಗೊತ್ತಾದರೆ ಅವರೆಲ್ಲಾ, ಗಂಡಸಾಗಿ, ಮದುವೆಗೆಂದು ಗೊತ್ತಾದ ಹುಡುಗಿಯೊಡನೆ ಮಾತನಾಡದೆ ಸುಮ್ಮನೆ ಒಪ್ಪಿಗೆ

ಸೂಚಿಸಿ ಬಂದ ಹೆದರು ಪುಕ್ಕಲನೆಂದು ಗೇಲಿ ಮಾಡುವರೆಂದು ತಾತನವರಲ್ಲಿ ನಾನು ಹೆಣ್ಣಿನೊಡನೆ ಮಾತನಾಡುವ ಬಯಕೆ ಹೇಳಿಕೊಂಡಿದ್ದೆ!

ಹೆಣ್ಣಿನ ತಾಯಿಯವರಿಗೆ ನನ್ನ ಬೇಡಿಕೆಯನ್ನು ತಾತನವರು ತಿಳಿಸಿದಾಗ ಅವರು ಮರು ಮಾತಿಲ್ಲದೇ ಒಪ್ಪಿಗೆ ಸೂಚಿಸಿದ್ದರು. ಹೆಣ್ಣಿನ ಸೋದರತ್ತೆಯವರು ನನ್ನನ್ನು ಒಂದು ಕೋಣೆಯಲ್ಲಿ ಕುಳ್ಳರಿಸಿ  ಗಾಯತ್ರಿ ಈಗ ಬರ್ತಾಳೆ  ಎಂದು ತೆರಳಿದರು. ಸ್ವಲ್ಪ ಸಮಯದ ನಂತರ ಗಾಯತ್ರಿ ಕೋಣೆಯೊಳಗೆ ಅಡಿಯಿಟ್ಟ ಮೇಲೆ ನನಗೇನು ಮಾತನಾಡುವುದೆಂದು ಹೊಳೆಯಲೇ ಇಲ್ಲ! ಕಡೆಗೆ  ನಿಮ್ಮ ಹೆಸರೇನು? ಏನು ಓದಿದ್ದೀರಾ? ಮುಂದೆ ಯಾಕೆ ಓದಲಿಲ್ಲ? ಹಾಗು ಸಮಯ ದೂಡಲು ಏನು ಮಾಡುವಿರಿ? ಎಂದಷ್ಟೆ ಕೇಳಿ ಉತ್ತರ ಪಡೆದು, ಹೆಣ್ಣಿನೊಡನೆ ಮಾತನಾಡುವ ಶಾಸ್ತ್ರ(?) ಇರುಸು ಮುರುಸಿನಿಂದಲೇ ಮುಗಿಸಿ, ಇನ್ನು ಭಯವಿಲ್ಲಾ, ಧೈರ್ಯವಾಗಿ ಹೇಳಬಹುದು ಸ್ನೇಹಿತರಿಗೆ, ನಾನೂ ನನ್ನನ್ನು ಮದುವೆಯಾಗುವ ಹುಡುಗಿಯೊಡನೆ ಮಾತನಾಡಿದ್ದೆ, ಎಂದುಕೊಂಡು ಕೋಣೆಯಿಂದ ಹೊರ ಬಿದ್ದೆ.

ಹೆಣ್ಣು ನೋಡಿದ ಮೂರು ವಾರಗಳ ತರುವಾಯ, ಮೂರು ದಿನಗಳ ಮದುವೆ ಶಾಸ್ತ್ರ ಅದ್ದೂರಿಯಾಗಿ ಹೆಣ್ಣಿನ ಮನೆಯವರು ಎರಡೂ ಕಡೆಯ ಖರ್ಚನ್ನು ವಹಿಸಿಕೊಂಡು ನೆರವೇರಿಸಿದ್ದರು.

ಮದುವೆಯಾದ ವರ್ಷದೊಳಗೆ ನಾನು ತಂದೆಯಾಗುವ ಹರುಷ ಮನಸ್ಸಿನಲ್ಲಿತ್ತು. ತುಂಬು ಗರ್ಭಾವಸ್ಥೆಯಲ್ಲಿ ಗಾಯತ್ರಿ ತವರಿನಲ್ಲಿದ್ದಳು. ಆರನೆಯ ಇಂದ್ರಿಯದ ಆದೇಶದಂತೆ ಮಡದಿಯನ್ನು ನೋಡಲು ಬೆಂಗಳೂರಿಗೆ ಹೋದ ರಾತ್ರಿಯೇ ಅವಳಿಗೆ ಹೆರಿಗೆ ನೋವು ಕಾಣಿಸಿಕೊಂಡು ಆಸ್ಪತ್ರೆಗೆ ದಾಖಲು ಮಾಡಿದ್ದೆವು. ನಾನಲ್ಲಿಗೆ ಹೋಗುವ ಮುನ್ನಾ ದಿನ ಆಕೆಯ ಮೊದಲನೆ ತಮ್ಮನನ್ನು ಆತನ ಅನಾರೋಗ್ಯದ ನಿಮಿತ್ತ ಮತ್ತೊಂದು ಆಸ್ಪತ್ರೆಗೆ ದಾಖಲು ಮಾಡಲಾಗಿತ್ತು. ಅತ್ತೆಯವರು ಎರಡೂ ಆಸ್ಪತ್ರೆಗಳಿಗೆ ಪಾಳಿಯಲ್ಲಿ ಭೇಟಿ ನೀಡಿ ಮಗನ ಶುಶ್ರೂಷೆ ಹಾಗೂ ಮಗಳ ಸ್ಥಿತಿಯನ್ನು ಅವಲೋಕಿಸುತ್ತಿದ್ದರು. ಮಾರನೆಯ ದಿನ ಮಧ್ಯಾಹ್ನ ೨–೩೦ ಘಂಟೆಗೆ ನನ್ನ ಮಗ ಆಕಾಶ್ ಜನಿಸಿದ್ದ. ಮೊಮ್ಮಗನನ್ನು ಕಂಡ ಸಂತೋಷದೊಡನೆ ಅತ್ತೆಯವರು ತಮ್ಮ ಮಗನಿರುವ ಆಸ್ಪತ್ರೆಗೆ ತೆರಳಿದರು. ಆಕೆಗಾದ ಸಂತೋಷವನ್ನು ಕಂಡ ವಿಧಿಗೆ ಏಕೋ ಸಹಿಸಲಾಗದೆ ಅಂದೇ ಸಂಜೆ ಸುಮಾರು ಆರು ಘಂಟೆಗೆ ಆಕೆಯ ಮಗನನ್ನು ಯಾವುದೇ ಕನಿಕರ ತೋರದೆ ತನ್ನ ಬಳಿಗೆ ಸೆಳೆದಿದ್ದ! ಒಂದೆಡೆ ಜನನವೆಂದು ಹರ್ಷಿಸುವುದೋ ಅಥವ ಮತ್ತೊಂದೆಡೆ ಮರಣವೆಂದು ದುಃಖಿಸುವುದೋ ತಿಳಿಯಲಿಲ್ಲ! ಅಂತಹಾ ಕ್ಲಿಷ್ಟ ಪರಿಸ್ಥಿತಿಯನ್ನು ಅತ್ತೆಯವರು ಒಂದಿಷ್ಟೂ ಧೃತಿಗೆಡದೆ

ಬಂದದ್ದೆಲ್ಲಾ ಬರಲಿ, ಶ್ರೀಹರಿಯ ದಯೆಯೊಂದಿರಲಿ ಎಂದುಕೊಂಡು ನಿಭಾಯಿಸಿದ್ದರು.

ಗುಂಪಿನಲ್ಲಿ ಗೋವಿಂದ ಎಂಬಂತೆ ನನಗೂ ಒಂದು ತುಂಡು ಭೂಮಿಯ ಒಡೆಯನಾಗುವ ಸೌಭಾಗ್ಯವನ್ನು ಸಹೋದ್ಯೋಗಿಗಳು ಕಲ್ಪಿಸಿದ್ದರು! ಆಗೆಲ್ಲಾ ಸಾಗುವಳಿ ಭೂಮಿಯನ್ನು ಕುಂಟೆ ಲೆಕ್ಕದಲ್ಲಿ ಮಾರಾಟ ಮಾಡಲು ಆರಂಭಿಸಿಯಾಗಿತ್ತು. ಪರಿಣಾಮ, ಎಕರೆ ಜಮೀನನ್ನು ಕುಂಟೆ ಲೆಕ್ಕದಲ್ಲಿ ವಿಭಜಿಸಿ ಹತ್ತರಿಂದ ಹದಿನೈದು ಮನೆ ಕಟ್ಟಲರ್ಹವಾಗುವಂತೆ ಜಾಗವನ್ನು ವಿಕ್ರಯಿಸುತ್ತಿದ್ದರು. ಕಿರ್ಲೋಸ್ಕರ್‌ನ ಕೆಲವು ಸಹೋದ್ಯೋಗಿಗಳು ಈ ವ್ಯವಹಾರವನ್ನು ತಮ್ಮ ಉಪಕಸುಬಾಗಿಸಿಕೊಂಡಿದ್ದರು. ತನ್ಮೂಲಕ ಬೆಳವಾಡಿಯಲ್ಲಿ ನಾನೂ ಒಂದು ತುಂಡು ನೆಲ ಖರೀದಿಸುವಂತಾಯಿತು.

ಮನೆಯ ಪರಿಸ್ಥಿತಿ ಇದ್ದುದ್ದರಲ್ಲಿ ಸ್ವಲ್ಪ ಸುಧಾರಿಸಿತ್ತಾದರೂ, ಕೈಗೂ ಬಾಯಿಗೂ ಸರಿ ಹೋಗುವಂತಿತ್ತು. ಈ ನಡುವೆ ನನ್ನ ಹಾಗೂ ಗಾಯತ್ರಿಯ ಮನೆಯವರಿಂದ ಮೇಲಿಂದ ಮೇಲೆ "ಒಂದು ಕಣ್ಣು ಕಣ್ಣಲ್ಲ ಮನುಷ್ಯನಿಗೆ ಎರಡು ಕಣ್ಣುಗಳು ಭೂಷಣ" ಎಂಬ ನೆಪವೊಡ್ಡಿ ನಾವು ಎರಡನೆ ಮಗುವನ್ನು ಹೊಂದಲು ಒತ್ತಡ ಹೇರುತ್ತಿದ್ದರು. ನಮಗೆ ಬರುವ ಆದಾಯದಲ್ಲಿ ಇನ್ನೊಂದು ತುತ್ತಿನ ಚೀಲಕ್ಕೆ ಎಡೆ ಎಲ್ಲಿದೆ? ಮುಂದುವರೆದಂತೆ ಸಂಸಾರದಲ್ಲಿ ನಿಭಾಯಿಸಬೇಕಾದ ಸಾಲು ಸಾಲಿನ ಜವಾಬ್ದಾರಿಯ ಹೊರೆಯನ್ನು ಗಮನದಲ್ಲಿಟ್ಟುಕೊಂಡು ನಾನಂತು ಆದದ್ದಾಗಲಿ ನಾವಿಬ್ಬರು ನಮಗೊಂದೇ ಎನ್ನುವ ದಿಟ್ಟ ನಿರ್ಧಾರಕ್ಕೆ ಬಂದು ಎಲ್ಲರ ಬಯಕೆಯನ್ನು ಚಿಗುರಿನಲ್ಲೇ ಚಿವುಟಿದ್ದೆ.

ನನ್ನ ಮದುವೆಯಾಗಿ ಮೂರೂವರೆ ವರ್ಷಗಳಾದ ತರುವಾಯ, ಮೊದಲನೆಯ ತಮ್ಮನಾದ ಚಂದ್ರನ ಮದುವೆ ಜಯಂತಿ ಎಂಬುವರೊಡನೆ ಸಾಂಗವಾಗಿ ನೆರವೇರಿತ್ತು. ಇಬ್ಬರು ಸೊಸೆಯರೊಂದಿಗೆ ಅಮ್ಮನು ತಮ್ಮ ಹೆಗಲ ಮೇಲಿದ್ದ ಮನೆಯ ನಿರ್ವಹಣೆಯ ಜವಾಬ್ದಾರಿಯನ್ನು ಅಲ್ಪ ಸ್ವಲ್ಪ ಗೊಂದಲದೊಂದಿಗೆ ನಿಭಾಯಿಸುತ್ತಿದ್ದರು. ಆಗಾಗ್ಗೆ ಸಣ್ಣ ಪುಟ್ಟ ವ್ಯಾಜ್ಯಗಳು ಧುತ್ತೆಂದು ಉದ್ಭವಿಸಿ ಮನೆಯಲ್ಲಿನ ಸೌಹಾರ್ದತೆಗೆ ಧಕ್ಕೆ ತರುತ್ತಿತ್ತು. ಆ ಸಮಯದಲ್ಲಿ ಎಲ್ಲರೂ ಒಡಗೂಡಿ ಸಮಾಲೋಚನೆ ನಡೆಸಿ ಗೊಂದಲ ನಿರ್ಮೂಲನಕ್ಕೆ ದಾರಿ ಹುಡುಕುತ್ತಿದ್ದೆವು.

ಹೀಗೆ ಎರಡು ವರ್ಷಗಳುರುಳಿದ ಬಳಿಕ ನನ್ನ ಎರಡನೇ ತಮ್ಮನಾದ ಗಿರೀಶನ ಮದುವೆಯ ಮಾತುಕತೆ ಆರಂಭವಾಗುತ್ತಿದ್ದ ಹಾಗೆ ನಾನೊಂದು ಪ್ರಸ್ತಾಪವಿಟ್ಟಿದ್ದೆ ಮನೆಯವರ ಮುಂದೆ!

ನಾವೀಗಿರುವ ಮನೆ ಎರಡು ಕೋಣೆಯದ್ದು, ಅವೆರಡು ನನ್ನ ಮತ್ತು ತಮ್ಮನಾದ ಚಂದ್ರನ ಪಾಲಾಗಿದೆ. ಇನ್ನು ಮೂರನೇ ದಂಪತಿಗಳಿಗೇನು ಮಾಡುವುದು? ಮೂರು ಕೋಣೆಗಳ ಮನೆಯನ್ನು ನೋಡಬೇಕು, ನಾವು ಒಟ್ಟು ಆರು ಗಂಡು ಮಕ್ಕಳಾದ್ದರಿಂದ ಎಲ್ಲರ ಮದುವೆಯಾಗುವ ಹೊತ್ತಿಗೆ ಆರು ಕೋಣೆಗಳ ಮನೆಯನ್ನು ಎಲ್ಲಿ ಹುಡುಕುವುದು? ಅಲ್ಲದೆ ಅಷ್ಟು ದೊಡ್ಡ ಮನೆಯ ಬಾಡಿಗೆ ನಿರ್ವಹಣೆ ಹೇಗೆ?

ಹಾಗಾಗಿ ಇಲ್ಲಿಂದ ಮುಂದಕ್ಕೆ ನನ್ನನ್ನು ಹೊರತು ಪಡಿಸಿ, ಈಗಾಗಲೇ ಮದುವೆಯಾದವರು ಮತ್ತು ಮದುವೆಯಾಗುವವರು ತಮ್ಮದೇ ಆದ ಸಂಸಾರವನ್ನು ಹೂಡಿ ತಮ್ಮ ಕಾಲ ಮೇಲೆ ತಾವು ನಿಲ್ಲಲಿ. ಹಿರಿಯ ಮಗನಾದ ಕಾರಣ, ನಾನಿಲ್ಲೇ ಇದ್ದು ಒಂದೊಂದಾಗಿ ಎಲ್ಲರ ಮದುವೆಯ ಜವಾಬ್ದಾರಿ ಮುಗಿಸಿ ಅಪ್ಪ ಅಮ್ಮನವರೊಂದಿಗೆ ಬಾಳುವೆ!

ಈ ವಿಷಯ ಕೇಳಿದ ಅವರೆಲ್ಲರ ಸಮ್ಮುಖದಲ್ಲಿ ನಾನು ಮತ್ತೊಮ್ಮೆ ಖಳನಾಯಕನಂತಾಗಿದ್ದೆ! ಎಲ್ಲರು ಎದುರು ಬಿದ್ದು, ನಿನಗೇ ಜೊತೆಯಲ್ಲಿರಲು ಇಷ್ಟವಿಲ್ಲ, ಅದಕ್ಕಾಗಿ ಹೀಗೆ ಹೇಳುತ್ತಿರುವೆ. ಆರು ಕೋಣೆಗಳ ಮನೆ ಬೇಕಾದ ಕಾಲಕ್ಕೆ ನೋಡಿಕೊಳ್ಳೋಣ, ಈಗ ಮೂರು ಕೋಣೆಗಳ ಮನೆ ಹುಡುಕೋಣ ಎಂದು ನಿರ್ಣಯಿಸಿದರು!

ಕುವೆಂಪು ನಗರದಲ್ಲಿ ಮೂರು ಕೋಣೆಗಳುಳ್ಳ ಮನೆಯನ್ನು ಬಾಡಿಗೆಗೆ ಪಡೆದ ಮೇಲೆ ಗಿರೀಶ ಮತ್ತು ರೇಖಾರವರ ಮದುವೆಯಾಗಿತ್ತು.

ಮನೆಯಲ್ಲಿ ನಾಲ್ಕೂವರೆ ಜಡೆ, ಪುಟ್ಟ ತಂಗಿ ನೇತ್ರಾವತಿಯನ್ನು ಸೇರಿಸಿ! ಸಂಪಾದಿಸುವವರೆಲ್ಲಾ ತಮ್ಮ ಸಂಪಾದನೆಯ ಪೂರ್ತಾ ಹಣವನ್ನು ತಂದೆಯವರ ಕೈಯಲ್ಲಿಟ್ಟು ಬೇಕಾದಾಗ ಪಡೆಯುವ ಪದ್ಧತಿ ಯಾವುದೇ ಅಡಚಣೆ ಇಲ್ಲದೆ ಸಾಗಿತ್ತು.

ಒಟ್ಟೂ ಹದಿಮೂರು ಜನ ಒಂದೇ ಮನೆಯ ಸೂರಿನಡಿಯಲ್ಲಿ! ನೋಡಿದವರೆಲ್ಲಾ ಆಶ್ಚರ್ಯದೊಂದಿಗೆ ಪರ್ವಾಗಿಲ್ಲ! ಈ ಕಾಲದಲ್ಲೂ ಅವಿಭಕ್ತ ಕುಟುಂಬದ ಪದ್ದತಿಯನ್ನು ಮುಂದುವರೆಸುತ್ತಿದ್ದೀರಾ ಎಂದು ಸಂತೋಷ ವ್ಯಕ್ತಪಡಿಸುತ್ತಿದ್ದರು. ತಪ್ಪದೇ ಪ್ರತೀ ರಾತ್ರಿ ಊಟ ಮಾಡಲು ಮನೆಯವರೆಲ್ಲರೂ ಒಟ್ಟಾಗಿ ನೆಲದ ಮೇಲೆ ಕುಳಿತರೆ ಹಬ್ಬದ ಕಳೆ ಕಟ್ಟುತ್ತಿತ್ತು. ಕೆಲವೊಮ್ಮೆ ವ್ಯರ್ಥ, ಅಪ್ರಾಮುಖ್ಯ ಹಾಗೂ ಬೇಡದ ವಿಚಾರಗಳು ಆ ಸಮಯದಲ್ಲಿ ನುಸುಳಿ ವಿಜೃಂಭಿಸಿ ಆ ಕಳೆಯನ್ನು ನಾಶಪಡಿಸಲು ಶಕ್ತವಾಗಿರುತ್ತಿತ್ತು.

ಅಷ್ಟೊತ್ತಿಗಾಗಲೇ ತಂದೆಯವರಿಗೆ ನಿವೃತ್ತಿಯಾಗಿತ್ತು. ಅವರ ಹಿತೈಷಿಗಳಾದ ಸಿಂಗ್ ಮತ್ತು ಸ್ವಾಮಿಯವರು ನಮ್ಮ ಮನೆಗೆ ಬಂದಾಗಲೆಲ್ಲಾ ಇಷ್ಟೊಂದು ಬಾಡಿಗೆ ಕೊಟ್ಟು ಜೀವಮಾನವಿಡೀ ಸವೆಸುವುದರ ಬದಲು, ಇರುವ ಜಾಗದಲ್ಲಿ ಸಾಲ ಗೀಲ ಮಾಡಿ ಮನೆ ಕಟ್ಟಿ, ಬಾಡಿಗೆಗೆ ಕೊಡುವ ಹಣವನ್ನು ಬ್ಯಾಂಕ್ ಸಾಲಕ್ಕೆ ಕೊಟ್ಟರೆ ಮುಂದೊಂದು ಕಾಲಕ್ಕೆ ಸ್ವಂತ ಮನೆ ಉಳಿಯುವುದಲ್ಲಾ? ಎನ್ನುತ್ತಿದ್ದರು.

ಸರಿ, ತಂದೆಯವರ ನಿವೃತ್ತಿಯ ಹಣದೊಂದಿಗೆ ಮಕ್ಕಳೆಲ್ಲರೂ ತಮ್ಮ ಯಥಾಶಕ್ತಿ ಕೈಸಾಲವನ್ನು ಮಾಡಿ ನಾಲ್ಕು ಗೋಡೆ ಕಟ್ಟಿ ಒಂದು ಸೂರನ್ನು ಹೊದಿಸಿ ಜೀವನ ನಡೆಸೋಣವೆಂದು ನಿರ್ಧರಿಸಿ ಆರಂಭಿಸಿದ ಮನೆ ಕಟ್ಟುವ ಕಾರ್ಯ ಆರಂಭವಾದ ವೇಗದಲ್ಲೇ ಸ್ಥಗಿತಗೊಂಡಿತು! ಕಾರಣ, ಬರೀ ಮಾತಿನಲ್ಲಿದ್ದ ನಮ್ಮ ಯೋಜನೆಯ ಸರಳ ಮನೆಯ ನೀಲಿನಕ್ಷೆ ಗುದ್ದಲಿ ಪೂಜೆಯ ಸಮಯಕ್ಕೆ ಸಂಪೂರ್ಣ ಬದಲಾಯಿಸಿ ಮೂರು ಕೋಣೆಗಳೊಡನೆ ವಿಶಾಲವಾದ ಪಡಸಾಲೆ, ಅಡುಗೆ ಮನೆ, ಬಚ್ಚಲು ಮನೆ, ದೇವರ ಮನೆ ಎಂದೆಲ್ಲಾ ಸೇರಿ ಕಟ್ಟಡದ ಕೆಲಸ ತಾರಸಿಯವರೆಗೆ ಬರುವಂತಾಗಿತ್ತು. ಮುಂದೇನು? ಜಾಗ ಗ್ರಾಮಪಂಚಾಯಿತಿ ಮಿತಿಯಲ್ಲಿದ್ದುದ್ದರಿಂದ ಬ್ಯಾಂಕ್‌ನಿಂದ ಸಾಲ ಮಂಜೂರಾಗುವುದಿಲ್ಲ, ಕೈಸಾಲದಿಂದ ಮನೆ ಕಟ್ಟಿ ಪೂರೈಸಲು ಸಾಧ್ಯವಿಲ್ಲ ಎಂಬ ವಾಸ್ತವತೆ ಅರಿವಾಗಿ ಆದದ್ದಾಗಲಿ ಇನ್ನು ಮನೆ ಕಟ್ಟುವ ಬಗ್ಗೆ ವಿಚಾರ ಮಾಡುವುದು ಬೇಡ ಎಂದು ನಿರ್ಧರಿಸಿಯಾಗಿತ್ತು. ಸಮಯ ಯಾರಿಗೂ ಕಾಯದೆ ಉರುಳುತ್ತಿತ್ತು, ಬಂಧು ಬಳಗದವರು ನೆನಪಾದಾಗಲೆಲ್ಲಾ ಮನೆಯ ಬಗ್ಗೆ ವಿಚಾರಿಸುತ್ತಿದ್ದರು, ಏನಾಯಿತು? ಯಾವಾಗ ಮುಂದುವರೆಸುತ್ತೀರಾ? ಎಂದು.

ಮಡದಿ ಗಾಯತ್ರಿ, ಮನೆಯವರ ಪರದಾಟವನ್ನು ನೋಡಲಾಗದೆ ಅದಕ್ಕೊಂದು ಪರಿಹಾರದ ಯೋಜನೆಯನ್ನು ನನ್ನ ಮುಂದಿಟ್ಟಳು ಸ್ತ್ರೀಸಹಜ ಶರತ್ತಿನೊಂದಿಗೆ! ಮನೆಯ ನಿರ್ಮಾಣದ ಕಾರ್ಯವನ್ನು ಮುಕ್ತಾಯಗೊಳಿಸಲು ಬೇಕಾಗಿದ್ದ ಹಣದ ವ್ಯವಸ್ಥೆಯನ್ನು ತನ್ನ ತಾಯಿಯವರ ಮೂಲಕ ಮಾಡಿಸಬಹುದು. ಆದರೆ ನಿರ್ಮಾಣಗೊಂಡ ಮನೆಯಲ್ಲಿ ನಮ್ಮನ್ನು ಹೊರತು ಪಡಿಸಿ ಮಿಕ್ಕವರೆಲ್ಲಾ ಇರಲಿ.

ವರದಕ್ಷಿಣೆಯ ವಿರೋಧಿಯಾಗಿದ್ದವನು ಈಗ ಅನಿವಾರ್ಯವಾಗಿ ಯಾವುದಾದರು ನಿರ್ಧಾರ ಕೈಗೊಳ್ಳಲೇಬೇಕಾದ ಇಬ್ಬಗೆಯ ಸ್ಥಿತಿ! ನನ್ನ ಸಿದ್ಧಾಂತಕ್ಕೆ ಬದ್ಧನಾಗಿ ಮನೆಯಲ್ಲಿರುವವರನ್ನು ಬಲಿ ಕೊಡುವುದೋ ಅಥವಾ ಸಿದ್ಧಾಂತವನ್ನು ಗಾಳಿಗೆ ತೂರಿ, ನನ್ನತನವನ್ನು ಮರೆತು ಸೋತು ಮನೆಯವರಿಗೆಲ್ಲಾ ಸ್ವಂತ ಸೂರಿನಲ್ಲಿರಿಸುವುದೋ? ತಕ್ಷಣಕ್ಕೆ ನಿರ್ಧರಿಸಲಾಗಲಿಲ್ಲ. ಕೆಲ ದಿನಗಳ ನಂತರ,

ಗಾದೆಯ ಮಾತಿನಂತೆ  ಹತ್ತು ಜನರಿಗೆ ಒಳ್ಳೆಯದಾಗುವುದಾದರೆ, ಒಬ್ಬನು ತನ್ನ ಸಿದ್ಧಾಂತಕ್ಕೆ ಬದ್ಧನಾಗದಿದ್ದರೆ ಏನು ಕೆಡುಕಿಲ್ಲ! ಎಂದುಕೊಂಡು ಪರಿಹಾರದ ಯೋಜನೆಗೆ ಸಮ್ಮತ ಸೂಚಿಸಿದ್ದೆ. ಪ್ರಕೃತಿಯ ನಿಯಮವೇ ಹಾಗಲ್ಲವೆ? ಒಂದು ಬೇಕೆಂದರೆ ಮತ್ತೊಂದನ್ನು ಕಳೆದುಕೊಳ್ಳಬೇಕು. ಕಾಕತಾಳೀಯವೆಂಬಂತೆ ನಾನು, ನನ್ನ ಮಡದಿ ಹಾಗು ಮಗನನ್ನು ಹೊರತು ಪಡಿಸಿದರೆ, ನವ ಮನೆಯಲ್ಲಿ ಉಳಿಯುವವರ ಸಂಖ್ಯೆಯೂ ಕೂಡ ಹತ್ತು!

ಕಟ್ಟಡ ನಿರ್ಮಾಣದ ಕಾರ್ಯ ಸ್ಥಗಿತಗೊಂಡಿದ್ದ ಒಂದೂವರೆ ವರ್ಷದ ಬಳಿಕ ಕೆಲಸ ರಭಸದಿಂದ ಆರಂಭವಾಗಿ ನೂತನ ಮನೆಯ ಗೃಹಪ್ರವೇಶ ಸಮಾರಂಭ ಕೂಡ ಮುಗಿದಿತ್ತು. ಉಳಿದ ಚಿಲ್ಲರೆ ಕೆಲಸ ಮುಗಿದ ಮೇಲೆ ಹೊಸ ಮನೆ ಹೊಕ್ಕಲು ದಿನವನ್ನೂ ಸಹ ಗೊತ್ತು ಮಾಡಿಯಾಗಿತ್ತು. ಮನೆಯವರೆಲ್ಲಾ ಹೊಸ ಮನೆಯ ವಾಸಕ್ಕೆ ಸಂಭ್ರಮದಿಂದ ಸಿದ್ಧತೆ ನಡೆಸುತ್ತಿರುವಾಗ ನನಗೆ ಉಭಯ ಸಂಕಟ ಆರಂಭವಾಯಿತು ಏಕೆಂದರೆ, ಅಲ್ಲಿಯವರೆಗೆ ನಾನು ಅವರಿಗೆ ಹೊಸ ಮನೆಯಲ್ಲಿನ ನನ್ನ ಅನುಪಸ್ಥಿತಿಯ ಬಗ್ಗೆ ಮಾಹಿತಿ ಕೊಟ್ಟಿರಲಿಲ್ಲ! ಹೊರಡುವ ಹಿಂದಿನ ರಾತ್ರಿ ಯಥಾಪ್ರಕಾರ ಎಲ್ಲರ ಊಟವಾದ ಮೇಲೆ ವಿಧಿಯಿಲ್ಲದೆ ಮನಸ್ಸನ್ನು ಗಟ್ಟಿ ಮಾಡಿಕೊಂಡು ವಿಷಯ ತಿಳಿಸಿದೊಡನೆ ಅವರ ಪ್ರತಿಕ್ರಿಯೆ ವರ್ಣಿಸಲಸದಳ! ಆಶ್ಚರ್ಯದೊಂದಿಗೆ ಉಮ್ಮಳಿಸಿದ ದುಃಖ ದುಮ್ಮಾನವಂತೂ ಹೇಳ ತೀರದು. ಕಡೆಗೆ ಹರಸಾಹಸ ಮಾಡಿ ಎಲ್ಲರನ್ನು ಒಪ್ಪಿಸಿದ್ದಾಯಿತು!

ಕಾಲಕ್ಕೆಷ್ಟು ಕೃತಜ್ಞತೆ ಸಲ್ಲಿಸಿದರೂ ಸಾಲದು, ಸಮಯ ಉರುಳಿದ ಹಾಗೆ ದುಃಖದ ತೀವ್ರತೆಯ ಪ್ರಮಾಣ ಕ್ರಮೇಣ ಶಮನವಾಗುತ್ತಿತ್ತು. ಆದರೂ ವಿಧಿಗೆ ಏನೋ ಒಂದು ತರಹದ ತೀರದ ದಾಹ, ಅಷ್ಟು ಸುಲಭವಾಗಿ ಯಾರನ್ನೂ ನೆಮ್ಮದಿಯಾಗಿರಲು ಬಿಡುವುದಿಲ್ಲ! ತಮ್ಮನಾದ ಚಂದ್ರನು, ತಾನು ಉದ್ಯೋಗ ಮಾಡುತ್ತಿದ್ದ ಕಾರ್ಖಾನೆಯು ದಿವಾಳಿಯಾಗಿ ಅಲ್ಲಿನ ಕಾರ್ಮಿಕರೆಲ್ಲಾ ಕೆಲಸವಿಲ್ಲದೇ ತಮ್ಮ ಸೇವಾವಧಿಗನುಸಾರವಾಗಿ ಒಂದಿಷ್ಟು ಹಣದೊಂದಿಗೆ ಹೊರಗೆ ಬರುವಂತಾಯಿತು. ಮುಂದಿನ ಭವಿಷ್ಯದ ಬಗ್ಗೆ ಸಾಧ್ಯವಿದ್ದ ಎಲ್ಲಾ ಅವಕಾಶಗಳನ್ನು ಪರಿಗಣಿಸಿ ಕಡೆಗೆ ಸ್ವಂತವಾಗಿ  ಹಣ್ಣು ಮತ್ತು ತರಕಾರಿ  ಯ ವ್ಯಾಪಾರ ಮಾಡಲು ನಿರ್ಧರಿಸಿ, ವ್ಯಾಪಾರದ ಬೇಕು ಬೇಡಗಳನ್ನು ಬೆಳವಾಡಿಯಲ್ಲಿ ವಾಸಿಸುತ್ತಿದ್ದರೆ ಪೂರೈಸುವುದಕ್ಕೆ ಸಾಧ್ಯವಿಲ್ಲವೆಂದು ಮನಗಂಡು ತನ್ನ ಪತ್ನಿಯೊಂದಿಗೆ ಮನೆಯಿಂದ ಹೊರಕ್ಕೆ ಬರಲು ನಿರ್ಧರಿಸಬೇಕಾಯಿತು!

ಕಿರ್ಲೋಸ್ಕರ್ ಕಾರ್ಖಾನೆಯಲ್ಲಿ ನಾನು ಸೇವೆ ಸಲ್ಲಿಸುತ್ತಿದ್ದ ಕಡೆಯ ದಿನದವರೆಗೂ ದೇವರ ಮೇಲಿಡುವ ಹೂವು ತಪ್ಪಿದರೂ ಬೆಳವಾಡಿಯ ಮನೆಗೆ ನೀಡುವ ನನ್ನ ಭೇಟಿ ತಪ್ಪುತ್ತಿರಲಿಲ್ಲ. ಪ್ರತೀದಿನ ಕಾರ್ಖಾನೆಯಿಂದ ಮನೆಗೆ ಹಿಂದಿರುಗುವಾಗ ಎಷ್ಟೇ ಹೊತ್ತಾಗಿರಲಿ, ಮಳೆಯಿರಲಿ ಇಲ್ಲ ಗಾಳಿಯಿರಲಿ ಎಲ್ಲರನ್ನು ಒಮ್ಮೆ ನೋಡಿ ಮಾತನಾಡಿಸಿಯೇ ಹೋಗುತ್ತಿದ್ದುದ್ದಲ್ಲದೆ ಮನೆಯಲ್ಲಿನ ಹಣಕಾಸಿನ ವಿಚಾರದಲ್ಲಿರುವ ಕುಂದು ಕೊರತೆಯನ್ನು ನೀಗಿಸುವ ನಿಟ್ಟಿನಲ್ಲಿ ಕರ್ತವ್ಯಚ್ಯುತಿಯಾಗದಂತೆ ಜಾಗ್ರತೆ ವಹಿಸುತ್ತಿದ್ದೆ.

ಇನ್ನು ನನ್ನ ನಾಲ್ಕನೆಯ ಸಹೋದರನಾದ ವೇಣುಗೋಪಾಲನು ಸಾಮಾನ್ಯರ ಹಾಗೇ ಜೀವನದ ಕಟ್ಟುಪಾಡಿನ ಚೌಕಟ್ಟಿನಲ್ಲಿ ಉಳಿದು ಬೆಳೆಯಲಿಚ್ಛಿಸದೆ ಚೌಕಟ್ಟಿನ ಹೊರಗೆ ತನ್ನದೇ ಆದ ನೆಮ್ಮದಿ ಸುಖಗಳನ್ನು ಅರಸುತ್ತಾ ತನ್ನ ಜೀವನವನ್ನು ರೂಪಿಸಿಕೊಂಡಾಗ ಮನೆಯವರಿಗಾದ ನೋವು ಅಷ್ಟಿಷ್ಟಲ್ಲ. ಯಾರ ಕೈಯಲ್ಲಿದೆ ನಿಯಂತ್ರಣ, ವಿಧಿಗಲ್ಲದೆ? ನಾವೆಲ್ಲಾ ಬರೀ ಪಾತ್ರಧಾರಿಗಳು, ಸೂತ್ರಧಾರಿ ಕುಣಿಸಿದಂತೆ ಕುಣಿಯುವುದಷ್ಟೇ ಉಳಿದಿರುವುದು ಬದುಕಿನಲ್ಲಿ.



# ಅಧ್ಯಾಯ ೬

## ವಿದೇಶ ಪಯಣ

ಕಿರ್ಲೋಸ್ಕರ್ ಕಾರ್ಖಾನೆಯ ಕಂಪ್ಯೂಟರ್ ವಿಭಾಗವನ್ನು ಮುಚ್ಚಿದ ಮೇಲೆ ಅಲ್ಲಿದ್ದ ನೌಕರರನ್ನು ಅವರವರ ಅನುಭವಕ್ಕನುಸಾರವಾಗಿ ಇತರ ವಿಭಾಗಗಳಿಗೆ ವರ್ಗಾಯಿಸಿದ್ದರ ಫಲವಾಗಿ ನಾನು ಖರೀದಿ ವಿಭಾಗಕ್ಕೆ ದಾಖಲಾದೆ. ಮುಂದುವರೆದಂತೆ ಕಾರ್ಖಾನೆಯ ಸಕಲ ವಿಭಾಗಗಳ ಆಗು ಹೋಗುಗಳ ಅರಿವು, ಉದ್ಯೋಗ ಪಯಣದಲ್ಲಿನ ಏಳು ಬೀಳುಗಳಲ್ಲದೇ, ವಿವಿಧ ವಿಭಾಗಗಳಲ್ಲಿ ಸೇವೆ ಸಲ್ಲಿಸುವ ಸದವಕಾಶಗಳು ಪರ್ವತಾಕಾರವಾದ ಕಲಿಕೆಗೆ ಜೋಪಾನವಾಗಿ ಪೇರಿಸಿಟ್ಟ ಸೋಪಾನಗಳಂತಾಗಿ ಹದಿನಾರುವರೆ ವರ್ಷಗಳ ಅವಧಿಯನ್ನು ಕಳೆದಿದ್ದುದ್ದನ್ನು, ಇಲ್ಲಾ! ಕಳೆದಿರಲಿಲ್ಲ. ಬದಲಿಗೆ ಸಂಸ್ಥೆಯ ಸೇವೆಯುದ್ದಕ್ಕೂ ಅನುಭವವೆಂಬ ಬೆಲೆ ಕಟ್ಟಲಾಗದ ಮೂಟೆಗಳನ್ನು ಕೂಡಿಸಿತ್ತು!

ಕಿರ್ಲೋಸ್ಕರ್‌ನ ಸೇವಾವಧಿಯಲ್ಲಿ ನಾನು ಒಡನಾಡುತ್ತಿದ್ದ ಸಹೋದ್ಯೋಗಿಗಳು ಹಾಗೂ ಅವರ ಸ್ನೇಹಿತರ ವೃಂದದಲ್ಲಿ ರಮೇಶ್ (ಡಾಕ್ಟ್ರು), ಲೋಕನಾಥ್ ಪ್ರಸಾದ್ (ಎಸ್ಸೆಮ್), ರಮೇಶ್ (ಗೊಬ್ಬಿ), ಚಂದ್ರಶೇಖರ್ (ನಾಯ್ಕ), ಸತೀಶ್ (ಬಂಡೆ), ಲಕ್ಷ್ಮಿನಾರಾಯಣ (ಡುಮ್ಮ) ಮತ್ತು ರವಿಶಂಕರ್ (ತರ್ಲೆ) ಎಂಬುವರೊಡನೆ ನನ್ನ ಸ್ನೇಹ ನಿಕಟಗೊಂಡು ಪ್ರತಿಯೊಬ್ಬರ ಮನೆಗಳಿಗೆ ಆಗಾಗ್ಗೆ ಹೋಗಿ ಬರುವ ಪರಿಪಾಠ ಆರಂಭವಾಗಿ ಒಬ್ಬರಿಗೊಬ್ಬರು ಆದರಿಸುತ್ತಾ, ಕಷ್ಟ ಸುಖಗಳ ವಿಚಾರ ವಿನಿಮಯ ಮಾಡಿಕೊಳ್ಳತೊಡಗಿದೆವು. ಇದಲ್ಲದೆ, ಪ್ರತೀ ಭಾನುವಾರ ಸಂಜೆ ನಾಯ್ಕನ ಮನೆಯಲ್ಲಿ ನಮ್ಮೆಲ್ಲರ ಮದುವೆಗೆ ಮುನ್ನ ಹಾಗೂ ನಂತರವೂ ನಮ್ಮ ಮಡದಿ ಮಕ್ಕಳೊಂದಿಗೆ ಕೂಡಿ ಉಭಯಕುಶಲೋಪರಿಯಿಂದ ಆರಂಭಿಸಿ ಪ್ರಪಂಚದ ಸಕಲ ವಿಚಾರಗಳ ಬಗ್ಗೆ ಚರ್ಚೆ ನಡೆಸುವುದಲ್ಲದೇ ಒಬ್ಬರನ್ನೊಬ್ಬರು ಛೇಡಿಸಿ ನಕ್ಕು ನಗಿಸಿ ನಾಯ್ಕನ

ಮನೆಯ ಲಘುಉಪಹಾರ ಸೇವಿಸಿ ಕೆಲ ಸಮಯವನ್ನು ಹರುಷದಿಂದ ಕಳೆಯುತ್ತಿದ್ದೆವು. ಸಾಧ್ಯವಾದಾಗಲೆಲ್ಲಾ ತಿಂಗಳಿಗೋ ಎರಡು ತಿಂಗಳಿಗೊ ಒಮ್ಮೆ ತಪ್ಪದೇ ದ್ವಿಚಕ್ರ ವಾಹನಗಳಲ್ಲಿ ಮೈಸೂರಿನ ಸಮೀಪದ ಪ್ರೇಕ್ಷಣೀಯ ಸ್ಥಳಗಳಿಗೆ ಒಂದು ದಿನದ ಪ್ರವಾಸಗೈಯುತ್ತಿದ್ದೆವು.

ಸ್ವಭಾವತಃ ಅಲ್ಪತೃಪ್ತನಾದ ನಾನು, ಉದ್ಯೋಗ ಬದಲಿಸಲು ಸಾಕಷ್ಟು ಅವಕಾಶಗಳಿದ್ದರೂ, ಸಹೋದ್ಯೋಗಿಗಳಿಂದ ಹಾಗೂ ಮನೆಯವರಿಂದ ನಿಂದನೆಗಳಾಗುತ್ತಿದರೂ ಕಿರ್ಲೋಸ್ಕರ್ ಎಲೆಕ್ಟ್ರಿಕ್ ಸಂಸ್ಥೆಯನ್ನು ತೊರೆಯಲು ಮನಸ್ಸು ಮಾಡದವನು ಅಷ್ಟೊಂದು ಸುಧೀರ್ಘ ಸೇವೆಯ ತರುವಾಯ ತ್ಯಜಿಸಲು ನಿರ್ಣಯಿಸಿದ್ದೆ! ಪ್ರಕೃತಿಯ ನಿಯಮವೇ ಹಾಗಲ್ಲವೆ? ನಡೆಯುವುದೆಲ್ಲಾ ನಾವಂದುಕೊಂಡ ವಿರುದ್ಧವಾಗಿಯೇ. ಈ ಸಂಸ್ಥೆಯಿಂದಲೇ ವೃತ್ತಿ ಜೀವನದಿಂದ ನಿವೃತ್ತಿ ಹೊಂದಲು ಬಯಸಿದ್ದವನು, ಧಿಡೀರ್ ಎಂದು ರಾಜಿನಾಮೆ ಕೊಡಲು ಕಾರಣ ಕಂಪೆನಿಯಲ್ಲಿ ಆಗಿದ್ದ ಮಹತ್ತರ ಬದಲಾವಣೆ. ನನ್ನ ಸ್ವಾಭಿಮಾನಕ್ಕೆ ಧಕ್ಕೆ ಮತ್ತು ನಿಯತ್ತಿಗೆ ಕುತ್ತು ಬರುವ ಪ್ರಸಂಗ ಎದುರಾಗುವುದರಲ್ಲಿದ್ದು, ಅದರ ಕಾವು ಕೆಲವು ಸಹೋದ್ಯೋಗಿಗಳನ್ನು ಆಗಲೇ ಬಲಿ ತೆಗೆದುಕೊಂಡಿದ್ದನ್ನು ಕಂಡು ಸಹಿಸಲಾಗದೆ ಬಿಡುಗಡೆ ಹೊಂದಲು ಪರಿತಪಿಸಿದ್ದೆ. ನನ್ನನ್ನು ಅಲ್ಲೇ ಉಳಿಸಿಕೊಳ್ಳುವ ನಿಟ್ಟಿನಲ್ಲಿ ವ್ಯವಸ್ಥಾಪಕರು ಒಡ್ಡಿದ್ದ ಆಮಿಷಗಳಿಗೆ ತಲೆಬಾಗದೆ ಹೊರಗೆ ಬರಲು ಮೂರು ತಿಂಗಳು ಬೇಕಾಯಿತು, ಬದುಕಿತು ಬಡಜೀವ ಎಂಬಂತೆ ಹೊರಗೇನೋ ಬಂದದ್ದಾಯಿತು. ಆದರೆ ಮುಂದೇನು?

ಗೊತ್ತು ಗುರಿ ಒಂದೂ ಇಲ್ಲದೆ ಎಲ್ಲೆಲ್ಲೋ ಏನೇನನ್ನೋ ಪ್ರಯತ್ನಿಸಿದ್ದಾಯಿತಾದರು ಯಾವುದೂ ಕೈಗೆ ಹತ್ತಲಿಲ್ಲ. ಎಲ್ಲಿಯಾದರು ಕೆಲಸಕ್ಕೆ ಸೇರುವುದೋ ಅಥವ ಏನಾದರು ಸ್ವಂತ ವ್ಯಾಪಾರ ಆರಂಭಿಸುವುದೋ ಎಂಬ ದ್ವಂದ್ವದಲ್ಲಿ ಎರಡು ವಾರ ಕಳೆಯಿತು. ಆಗ ನನ್ನ ಮೂರನೆಯ ತಮ್ಮನಾದ ಕುಮಾರನ ಸ್ನೇಹಿತ ವಿಜಯ್ ಎನ್ನುವವರು ತಮ್ಮ ತಂದೆಯವರಾದ ಕಣ್ಣನ್ ಎಂಬುವರೊಡಗೂಡಿ ದೇವರಾಜ ಅರಸ್ ರಸ್ತೆಯಲ್ಲಿ ನಡೆಸುತ್ತಿದ್ದ ಅಜಯ್ ಸೇಲ್ಸ್ ಅಂಡ್ ಸರ್ವಿಸ್‌ಗೆ ಭೇಟಿ ಕೊಟ್ಟು ಮುಂದೇನು ಮಾಡಬಹುದು ಎನ್ನುವುದರ ಬಗ್ಗೆ ಸಲಹೆ ಪಡೆಯಲು ಹೋಗಿ ವಿಚಾರ ವಿನಿಮಯವಾಗಿ ಶ್ರೀಯುತ ಕಣ್ಣನ್‌ರವರು "ಮೋಹನ್, ನಮಗೆ ಒಬ್ಬ ಸೇಲ್ಸ್ ಎಕ್ಸಿಕ್ಯುಟಿವ್‌ನ ಅವಶ್ಯಕತೆ ಇದೆ, ಹುಡುಕುತ್ತಿದ್ದೇವೆ, ಇನ್ನೂ ಯಾರನ್ನು ನಿಶ್ಚಯಿಸಿಲ್ಲಾ, ನೀವು ಒಪ್ಪಿದರೆ ನಿಮ್ಮನ್ನು ಸೇರಿಸಿಕೊಳ್ಳಲು ನಮಗೆ ಬಹಳ ಸಂತೋಷವಾಗುತ್ತದೆ" ಎಂದರು. ಆಕಸ್ಮಿಕವಾಗಿ

ಬಂದ ಅವಕಾಶಕ್ಕೆ ಪ್ರತಿಕ್ರಿಯಿಸಲು ನನಗೆ ಸ್ವಲ್ಪ ಸಮಯ ಹಿಡಿಯಿತು. ಅವರೇ ಮುಂದುವರೆದು, "ದೊಡ್ಡ ಕಂಪೆನಿಯಲ್ಲಿ ಇಷ್ಟೊಂದು ವರ್ಷ ಕೆಲಸ ಮಾಡಿದ ಅನುಭವ ಇದೆ ನಿಮಗೆ, ಅಲ್ಲಿನ ಸಂಬಳ ನಮ್ಮಿಂದ ಸರಿತೂಗಿಸಲಾಗೊಲ್ಲ" ಎಂದರು. ಆದರೂ ಮನಸ್ಸು ಅಷ್ಟರಲ್ಲಾಗಲೇ ನಿರ್ಧರಿಸಿತ್ತು, ಬರಿಗೈಗಿಂತ ಹಿತ್ತಾಳೆ ಕಡಗ ವಾಸಿ, ಬೇರೆ ಯಾವುದಾದರು ಒಳ್ಳೆಯ(?) ಕೆಲಸ ಸಿಗುವವರೆಗೂ ಇಲ್ಲಿ ಮಾಡಿದರಾಯಿತೆಂದು ಒಮ್ಮತ ಸೂಚಿಸಿದೆ! ಈ ಸಂಸ್ಥೆಯು ಹೆಸರಾಂತ ಕಂಪೆನಿಗಳ ಪವರ್ ಟೂಲ್ಸ್‌ನ ಮಾರಾಟ ಹಾಗೂ ದುರಸ್ತಿ ಕಾರ್ಯವನ್ನು ನಿಭಾಯಿಸುತ್ತಿತ್ತು. ಎಂಟು ತಿಂಗಳು ಮೈಸೂರು, ಮಂಡ್ಯ, ಶ್ರೀರಂಗಪಟ್ಟಣ, ನಂಜನಗೂಡು ಮತ್ತು ಹುಣಸೂರಿನಲ್ಲಿರುವ ಎಲ್ಲಾ ಕೈಗಾರಿಕಾ ವಲಯಗಳನ್ನು ಎಡಬಿಡದೆ ಪ್ರದಕ್ಷಿಣೆ ಹಾಕಿದ್ದಾಗಿತ್ತು ಸಂಸ್ಥೆಯ ವ್ಯಾಪಾರ ವೃಧ್ಧಿಯ ಸಲುವಾಗಿ. ನಿರಂತರ ಹಾಗೂ ಸಾವಕಾಶವಾದ ಈ ಅಲೆದಾಟದಿಂದ ಅರಿತ ವಿಚಾರವೇನೆಂದರೆ, ಬೆರಳೆಣಿಕೆ ಸಂಖ್ಯೆಯ ಕಾರ್ಖಾನೆಗಳನ್ನು ಹೊರತು ಪಡಿಸಿದರೆ ಮಿಕ್ಕೆಲ್ಲವುಗಳ ಉದ್ದಿಮೆಗೆ ಏಳಿಗೆಯಿಲ್ಲವೆಂದು. ಈ ಕೈಗಾರಿಕಾ ವಲಯಗಳು ಅಕ್ಷರಶಃ ಸ್ಮಶಾನ ಸದೃಶವಾಗಿದ್ದವು!

ಪ್ರಕಾಶ್‌ರಾವ್, ನಾನು ಕಿರ್ಲೋಸ್ಕರ್ ಕಾರ್ಖಾನೆಯ ಕಂಪ್ಯೂಟರ್ ವಿಭಾಗಕ್ಕೆ ದಾಖಲಾಗಿದ್ದ ಮಾರನೆಯ ದಿನ ಕಾರ್ಖಾನೆಯಲ್ಲಿ ಕಂಡರು. ಇದೇನ್ಸಾರ್ ಇಲ್ಲಿ? ಎಂದಿದ್ದಕ್ಕೆ ಮೋನಿ– ಅವರು ನನ್ನನ್ನು ಸಂಭೋಧಿಸುತ್ತಿದ್ದದ್ದು ಹಾಗೇ– ಎನ್.ಐ.ಇ. ಸಂಸ್ಥೆಯನ್ನು ಬಿಟ್ಟೆ, ಇವತ್ತು ನನ್ನ ಮೊದಲನೆ ದಿನ ಕಿರ್ಲೋಸ್ಕರ್‌ನಲ್ಲಿ ಎಂದಿದ್ದರು. ಮತ್ತೆ ನಾನು ಕಿರ್ಲೋಸ್ಕರ್ ಕಾರ್ಖಾನೆಯನ್ನು ತ್ಯಜಿಸಿದ ಕೆಲವೇ ತಿಂಗಳಲ್ಲಿ ಅವರೂ ಸಹ ರಾಜೀನಾಮೆ ಸಲ್ಲಿಸಿ ಶಾಂತಲ ಚಲನಚಿತ್ರ ಮಂದಿರದ ಸನಿಹವಿರುವ ಆರ್.ಇ.ಐ. ಕಂಪೆನಿಯಲ್ಲಿ ಉದ್ಯೋಗ ಮಾಡುತ್ತಿದ್ದವರು ನನಗೆ ಫೋನಾಯಿಸಿದರು. ಇದೇನಪ್ಪಾ ಬಹಳ ದಿನಗಳ ನಂತರ ಕರೆ ಮಾಡಿದ್ದಾರೆ ಎಂದುಕೊಂಡು ಆಲಿಸಿದೆ. ಉಭಯಕುಶಲೋಪರಿಯಾದ ಮೇಲೆ ವಿಷಯಕ್ಕೆ ಬಂದರು. ತಾವು ಸೇವೆ ಸಲ್ಲಿಸುತ್ತಿದ್ದ ಅರ್.ಇ.ಐ ಕಂಪೆನಿಯು ಮೈಸೂರಿನ ಹೆಬ್ಬಾಳ್ ಕೈಗಾರಿಕಾ ವಲಯದಲ್ಲಿ ಹೊಸದಾಗಿ ನಿರ್ಮಿಸಿದ್ದ ಅರ್.ಇ.ಐ. ಎಲೆಕ್ಟ್ರಾನಿಕ್ಸ್ ಎಂಬ ಕಾರ್ಖಾನೆಯನ್ನು ನೋಡಿಕೊಳ್ಳಲು ಒಬ್ಬ ಸೂಕ್ತವಾದ ವ್ಯಕ್ತಿಯ ಅವಶ್ಯಕತೆ ಇದೆ, ನಿನ್ನ ನೆನಪು ಬಂತು, ನೀನು ಬಯಸಿದರೆ ಪ್ರಯತ್ನ ಪಡಬಹುದು, ನಾನು ಕಾರ್ಖಾನೆಯ ವ್ಯವಸ್ಥಾಪಕರಾದ ರಾಮಸ್ವಾಮಿಯವರಲ್ಲಿ ಮಾತನಾಡುವೆ ಎಂದರು. ನನಗೆ ಬಹಳ ಸಂತೋಷವಾಯಿತು, ಇಷ್ಟು ತಿಂಗಳಾದ ಬಳಿಕ ನನ್ನ ಅನುಭವಕ್ಕೆ ಸೂಕ್ತವಾದ ಕೆಲಸದ ಅವಕಾಶ ಹುಡುಕಿಕೊಂಡು ಬಂದಿದೆ ಎಂದು ತಕ್ಷಣ ಒಪ್ಪಿಗೆ ಸೂಚಿಸಿದೆ. ನಿಗದಿತ ದಿನ ಮುಖಾಮುಖಿ ಸಂದರ್ಶನ ನಡೆದು ಅಂತಿಮವಾಗಿ ಶ್ರೀಯುತ

ರಾಮಸ್ವಾಮಿಯವರು ಕಿರ್ಲೋಸ್ಕರ್‌ನಲ್ಲಿ ನೀವು ಪಡೆಯುತ್ತಿದ್ದ ಸಂಬಳವನ್ನು ನಮ್ಮಿಂದ ಭರಿಸಲು ಸಾಧ್ಯವಿಲ್ಲ, ಅದರ ಅರ್ಧದಷ್ಟು ಕೊಡಬಲ್ಲೆವು ಒಪ್ಪಿಗೆನಾ? ಎಂದರು. ಸಂಬಳದ ವಿಚಾರವಾಗಿ ಅಸಮಾಧಾನವಿದ್ದರೂ, ಮತ್ತೆ ನನ್ನ ಹದಿನಾರುವರೇ ವರ್ಷಗಳ ಉದ್ಯೋಗಾನುಭವಕ್ಕೆ ಪೂರಕವಾದ ಕೆಲಸದ ಜಾಡು ಹಿಡಿದು ಮುಂದುವರೆಯಬಹುದಲ್ಲಾ ಎನ್ನುವ ತೃಪ್ತಿಯಿಂದ ಸಮ್ಮತಿಸಿದೆ.

ಹೆಬ್ಬಾಳಿನ ಕಾರ್ಖಾನೆಯಲ್ಲಿ ವ್ಯವಸ್ಥಾಪಕರ ಹಾಗೂ ಪ್ರಕಾಶ್‌ರಾವ್‌ರವರ ಮಾರ್ಗದರ್ಶನದಲ್ಲಿ ಆರಂಭವಾದ ನನ್ನ ಉದ್ಯೋಗದಲ್ಲಿನ ಕಾರ್ಯವೈಖರಿಯಿಂದ ವ್ಯವಸ್ಥಾಪಕರ ಮನಸ್ಸನ್ನು ಗೆದ್ದಿದ್ದೆ. ಪ್ರಕಾಶ್‌ರಾವ್‌ರವರಿಗೆ ತಾವು ನನ್ನನ್ನು ಶಿಫಾರಸ್ಸು ಮಾಡಲು ತೆಗೆದುಕೊಂಡಿದ್ದ ನಿರ್ಧಾರದ ಬಗ್ಗೆ ಹೆಮ್ಮೆ ಇತ್ತು. ಕಿರ್ಲೋಸ್ಕರ್‌ನಲ್ಲಿರುವಾಗ ನೋಡಿ, ಕೇಳಿ ಹಾಗೂ ಮಾಡಿ ತಿಳಿದಿದ್ದ ಕಾರ್ಖಾನೆಯ ವಿವಿಧ ವಿಭಾಗಗಳ ನಿರ್ವಹಣಾ ತಂತ್ರಗಳನ್ನು ಇಲ್ಲಿ ಉಪಯೋಗಿಸಲು ಸದಾವಕಾಶ ಹೇರಳವಾಗಿತ್ತು. ಇಲ್ಲಿನ ಸಕಲ ವಿಭಾಗಗಳಲ್ಲಿ ನನ್ನ ಅನುಭವವನ್ನು ಒರೆ ಹಚ್ಚುವ ಶತಪ್ರಯತ್ನ ನಡೆಸಿದ್ದಕ್ಕೆ ತಕ್ಕ ಪ್ರತಿಫಲ ದೊರಕಿತ್ತು. ಆಗಾಗ್ಗೆ ಕೆಲವು ಉಪದ್ರವಗಳು ಇಣುಕಿ ನನ್ನ ಸಂಯಮ ಮತ್ತು ಬುದ್ಧಿಮತ್ತೆಗೆ ಬಲವಾದ ಸವಾಲೊಡ್ಡಿ, ಸಂಭಾಳಿಸಲು ಬಹು ಪ್ರಯಾಸಪಡಬೇಕಾಗುತ್ತಿತ್ತು. ಒಟ್ಟಿನಲ್ಲಿ ಅಲ್ಲಿಯ ಕೆಲಸವನ್ನು ಸಂಪೂರ್ಣ ಜವಾಬ್ದಾರಿಯಿಂದ ನಿರ್ವಹಿಸುತ್ತ ಪ್ರಗತಿ ಪಥದೆಡೆಗೆ ಸಾಗುತ್ತಿದ್ದುದ್ದರ ಬಗ್ಗೆ ಹೆಮ್ಮೆ ಇತ್ತು!

ಕಿರ್ಲೋಸ್ಕರ್‌ನಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ದಿನಂಪ್ರತಿ ಬೆಳವಾಡಿ ಮನೆಗೆ ನೀಡುತ್ತಿದ್ದ ಭೇಟಿ, ಅಜಯ್ ಸೇಲ್ಸ್ ಅಂಡ್ ಸರ್ವಿಸ್ ನಂತರ ಹೆಬ್ಬಾಳಿನ ಆರ್.ಇ.ಐ ಕಾರ್ಖಾನೆಯಲ್ಲಿ ಸೇವೆ ಆರಂಭಿಸಿದಾಗಲಿನಿಂದ ವಾರಕ್ಕೆ ಮೂರು ಅಥವ ನಾಲ್ಕು ದಿನಗಳಿಗೆ ಇಳಿದಿತ್ತಾದರೂ ಮನೆಯಲ್ಲಿನ ಬೇಕು ಬೇಡಗಳ ಬಗ್ಗೆ ಕಾಳಜಿ ಇತ್ತು.

ಇತ್ತ ಗಾಯತ್ರಿಯ ತವರು ಮನೆಯಲ್ಲಿ ಆಕೆಯ ಅಕ್ಕನವರು ಸ್ವಭಾವತಃ ಅಂತರ್ಮುಖಿಯಗಿದ್ದು ಸಾಮಾನ್ಯರ ಹಾಗೆ ಮದುವೆ, ಸಂಸಾರವೆಂಬ ಸುಳಿಗೆ ಸಿಲುಕದೆ ಉಪಾಧ್ಯಾಯಿನಿಯ ಕರ್ತವ್ಯವನ್ನು ಶಾಲೆಯಲ್ಲೂ ಹಾಗೂ ಮನೆಯಲ್ಲೂ ನಿರ್ವಹಿಸುತ್ತಾ ಪುಟ್ಟ ಮಕ್ಕಳೊಂದಿಗೆ ಸಂತೋಷದಿಂದ ತನ್ನ ಜೀವನವನ್ನು ನಿರ್ವಹಿಸುತ್ತಾ ಇರುವುದನ್ನು ಗಮನಿಸುತ್ತಿದ್ದ ವಿಧಿಗೆ ತನ್ನ ಲೋಕದಲ್ಲಿನ ಹರ್ಷದ ಕೊರತೆ ನೀಗಿಸಲೇನೋ ಎಂಬಂತೆ ಆಕೆಯನ್ನು ತನ್ನತ್ತ ಬರಸೆಳೆದಿದ್ದ! ಹೀಗೆ ಒಂದರ ಮೇಲೊಂದು ಬಲವಾದ ಪೆಟ್ಟು ತನ್ನ ಸಂಸಾರದ ಮೇಲೆ ಬೀಳುತ್ತಿದ್ದರೂ, ತನಗೆ ತೆರೆದ ಹೃದಯ ಶಸ್ತ್ರಚಿಕಿತ್ಸೆಯಾಗಿದ್ದರೂ ಕಳವಳ ಪಡದೆ ತನ್ನ ಎದೆಯನ್ನು ಗಟ್ಟಿ

ಮಾಡಿಕೊಂಡು ಬಂದದ್ದನ್ನೆಲ್ಲಾ ದಿಟ್ಟತನದಿ ಎದುರಿಸಿ ನಿಲ್ಲುವ ನಿಟ್ಟಿನಲ್ಲಿ ಅತ್ತೆಯವರು ತಮ್ಮ ಆರೋಗ್ಯದ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಹಾಗೂ ಮನೆಯನ್ನು ನಿಭಾಯಿಸಲು ಸೊಸೆಯ ಅವಶ್ಯಕತೆಯನ್ನು ಮನಗಂಡು ತಮ್ಮ ಮಗನ ಕಂಕಣ ಭಾಗ್ಯಕ್ಕೆ ನಾಂದಿ ಹಾಡಿದ್ದರು. ಸೂಕ್ತ ಸಂಬಂಧದಲ್ಲಿ ಶುಭದ ಎನ್ನುವ ಹೆಣ್ಣಿನೊಡನೆ ಹರೀಶನ ಮದುವೆಯ ಕಾರ್ಯ ಶೀಘ್ರದಲ್ಲೇ ನೆರವೇರಿತು. ಅದಾವ ಜನ್ಮದ ಪುಣ್ಯವೋ ಎಂಬಂತೆ, ಗೋತ್ರದ ಕಟ್ಟುಪಾಡಿಗೆ ಮಣೆ ಹಾಕದೆ, ಅತ್ತೆಯವರು ನಿರ್ಧರಿಸಿದ್ದಂತೆ ನಾನು ಹಾಗೂ ಗಾಯತ್ರಿ, ಹರೀಶನ ತಂದೆ ತಾಯಿಯ ಸ್ಥಾನದಲ್ಲಿ ನಿಂತು ಧಾರೆ ಎರೆಸಿಕೊಳ್ಳುವ ಮಂಗಳ ಕಾರ್ಯ ನಮ್ಮ ಪಾಲಾಗಿತ್ತು.

ಏಳು ತಿಂಗಳು ಸಂದಿತ್ತು ಆರ್.ಇ.ಐ ಎಲೆಕ್ಟ್ರಾನಿಕ್ಸ್‌ನಲ್ಲಿ ಸೇವೆ ಸಲ್ಲಿಸಲಾರಭಿಸಿ. ಒಂದು ಶುಕ್ರವಾರ ಸಂಜೆ ಆರೂವರೆಯಿಂದ ಏಳರ ಸಮಯ, ಯಾವುದೋ ಪ್ರಾಜೆಕ್ಟ್‌ನ ಸಲುವಾಗಿ ಮೀಟಿಂಗ್‌ನಲ್ಲಿದ್ದಾಗ ಸ್ನೇಹಿತ ವಿದ್ಯಾರಣ್ಯ ದೂರವಾಣಿ ಕರೆ ಮಾಡಿದ್ದ!

"ಮೋಹನ, ಎ.ಪಿ.ಸಿ ಕಾರ್ಖಾನೆಯ ಖರೀದಿ ವಿಭಾಗಕ್ಕೆ ಅಭ್ಯರ್ಥಿಗಳ ಸಂದರ್ಶನ ನಡೆಯುತ್ತಿದೆ, ನಿನ್ನ ಬಗ್ಗೆ ಮಾಹಿತಿ ಕೊಟ್ಟಿದ್ದೆ, ಮುರಳೀಧರನ್ ಎಂಬುವರು ಸಂದರ್ಶನ ಮಾಡುತ್ತಾರೆ, ತಯಾರಿದ್ದೀಯಾ?" ಎಂದ.

ನನಗೆ ಏನುತ್ತರಿಸಬೇಕೋ ತಿಳಿಯಲಿಲ್ಲ! ಇದ್ದಕ್ಕಿದ್ದಂತೆ ಬಂದ ಅವಕಾಶ, ಒಂದು ಘಂಟೆಯ ತರುವಾಯ ನಾನೇ ಕರೆ ಮಾಡುವೆ, ಏಕೆಂದರೆ ಈಗ ಮೀಟಿಂಗ್‌ನಲ್ಲಿ ಇದ್ದೇನೆಂದೆ. ಅವನೊಪ್ಪಿಗೆ ಸೂಚಿಸಿದ.

ಮುಂದೆ ಪ್ರಾಜೆಕ್ಟ್‌ನ ಬಗ್ಗೆ ಗಮನ ಹರಿಸಲಾಗದೆ ಹೇಗೋ ನಿಭಾಯಿಸಿ ಮೀಟಿಂಗ್ ನಡೆಯುತ್ತಿದ್ದ ಕೋಣೆಯಿಂದ ಹೊರಗೆ ಬಂದೆ. ಕರೆ ಮಾಡಲು ಇನ್ನೂ ಕಾಲಾವಕಾಶವಿತ್ತು. ಮನಸ್ಸು ಗಾಬರಿಯಿಂದ ಥೈ ತಕ ಎಂದು ಕುಣಿಯುತ್ತಿತ್ತು. ಸ್ವದೇಶಿ ಕಾರ್ಖಾನೆಗಳಲ್ಲಿ ಸುಮಾರು ಹದಿನೆಂಟು ವರ್ಷ ದುಡಿದ ಮೇಲೆ ಬಹುರಾಷ್ಟ್ರೀಯ ಕಂಪೆನಿಯ ಖರೀದಿ ವಿಭಾಗಕ್ಕೆ ಆಯ್ಕೆಯಾಗಲು ಅವಕಾಶ! ಅಧೈರ್ಯದಿಂದಲೇ ವಿದ್ಯಾರಣ್ಯನಿಗೆ ಕರೆ ಮಾಡಿದೆ.

ಆತ ಹೇಳಿದ ಕಿವಿಮಾತು... ಮೋಹನ, ಧೈರ್ಯವಾಗಿ ಮಾತನಾಡು, ಕೇಳುವ ಪ್ರಶ್ನೆಯನ್ನು ಸರಿಯಾಗಿ ಅರ್ಥ ಮಾಡಿಕೊ, ಅರ್ಥವಾಗದಿದ್ದರೆ ಮತ್ತೆ ಕೇಳಿ ಪ್ರಶ್ನೆ ಏನು ಎಂಬುದನ್ನು ಮನದಟ್ಟು ಮಾಡಿಕೊ, ನಂತರ ನಿನಗೇನು ತಿಳಿದಿದೆಯೋ ಅದನ್ನು ಸ್ಪಷ್ಟವಾಗಿ ಉತ್ತರಿಸು, ಗೊತ್ತಿದ್ದರೆ ಗೊತ್ತು, ಇಲ್ಲದಿದ್ದರೆ ಇಲ್ಲ ಎನ್ನು, ಸುಳ್ಳಿನ ಕಂತೆ ಬೇಡ, ಆಲ್ ದ ಬೆಸ್ಟ್! ಎಂದು, ಈಗ, ಮುರಳೀಧರನ್‌ಗೆ

ಕೊಡುತ್ತೇನೆ ಮಾತನಾಡು ಎಂದ. ಸರಿ, ಎಂದು ಉತ್ತರಿಸುತ್ತಿದ್ದ ಹಾಗೆ ಆ ಕಡೆಯಿಂದ ಯಾರು ಮೋಹನನಾ? ಎಂದರು ತಮಿಳಿನ ಛಾಪಿನಲ್ಲಿ. ಅಲ್ಲಿಗೆ ಎದೆ ಧಸಕ್ ಅಂತು. ಅವರೇನು ಕೇಳಿದರೋ ನಾನೇನು ಉತ್ತರಿಸಿದೆನೋ ಒಂದೂ ಸ್ಪಷ್ಟವಿಲ್ಲ, ಕಡೆಗೆ ಅವರು ಮಾತು ಮುಗಿಸಿದ್ದು ಹೀಗೆ– ನಾಳೆ, ಬೆಂಗಳೂರಿನ ಲ್ಯಾವೆಲ್ಲಿ ರಸ್ತೆಯಲ್ಲಿರುವ ಎ.ಪಿ.ಸಿ ಕಛೇರಿಗೆ ಬೆಳಿಗ್ಗೆ ಸರಿಯಗಿ ೧೦–೦೦ ಘಂಟೆಗೆ ಬನ್ನಿ– ನಾನು ಸರಿ ಸಾರ್ ಎಂದ ಕೂಡಲೇ ದೂರವಾಣಿಯ ಸಂಪರ್ಕವನ್ನು ತುಂಡರಿಸಿದರು.

ಮನಸ್ಸಿನಲ್ಲಿ ಚಡಪಡಿಕೆ ಹೆಚ್ಚಿತ್ತು. ಮನೆ ತಲುಪಿದಾಗ ಅರ್ಧಾಂಗಿ ಗಾಯತ್ರಿಗೆ ನಡೆದಿದ್ದು ತಿಳಿಸಿದೆ, ಅವಳೆಂದಳು, "ಎಲ್ಲಾ ಒಳ್ಳೆಯದಾಗುತ್ತೆ, ಧೈರ್ಯವಾಗಿ ಹೋಗಿ ಬನ್ನಿ".

ರಾತ್ರಿಯೆಲ್ಲಾ ನಿದ್ದೆ ಬರಲಿಲ್ಲ, ಹಾಸಿಗೆಯಲ್ಲಿ ಹೊರಳಿ ಸಾಕಾಯಿತು. ತಲೆಯಲ್ಲಿ ಒಂದೇ ಕೊರೆತ, ನಾಳೆ ಏನು ಕೇಳುತ್ತಾರೋ, ಎಷ್ಟರಮಟ್ಟಿಗೆ ಉತ್ತೀರ್ಣನಾಗುವೆನೋ ತಿಳಿಯುತ್ತಿಲ್ಲ. ನೆಮ್ಮದಿಯಾಗಿ ನನ್ನ ಪಾಡಿಗೆ ಇದ್ದವನಿಗೆ ಇದ್ಯಾವ ತಲೆನೋವು ಬಂದು ಕಾಡಲು ಆರಂಭಿಸಿತೋ ಎನ್ನಿಸತೊಡಗಿತ್ತು! ಮಾರನೇ ದಿನ ಸಮಯಕ್ಕೆ ಸರಿಯಾಗಿ ಹೇಳಿದ ಸ್ಥಳದಲ್ಲಿ ಹಾಜರಿದ್ದೆ. ಅಲ್ಲೋ ಸಾಕಷ್ಟು ಅಭ್ಯರ್ಥಿಗಳಾಗಲೇ ಜಮಾಯಿಸಿದ್ದರು. ವಿದ್ಯಾರಣ್ಯ ಬಂದು, ನನಗೆ ಈಗ ಬಿಡುವಿಲ್ಲ, ಮತ್ತೆ ಬರುತ್ತೇನೆ, ಕುಳಿತಿರು ನಿನ್ನ ಸರದಿ ಬರುವವರೆಗು ಎಂದು ಹೊರಟ. ನಂತರ ಎರಡು ಸುತ್ತಿನ ಮುಖಾಮುಖಿ ಸಂದರ್ಶನ ಮುಗಿಸಿ ತೆಪ್ಪಗೆ ಕುಳಿತಿದ್ದೆ. ವಿದ್ಯಾರಣ್ಯ ಬಂದು ಊಟಕ್ಕೆ ಕರೆದೊಯ್ಯುವಾಗ "ಹೇಗಾಯಿತು?" ಅಂದ. ನನಗೆ ತಿಳಿದ ಮಟ್ಟಿಗೆ ಉತ್ತರಿಸಿದ್ದೇನೆ, ನನಗಂತು ನಂಬಿಕೆಯಿಲ್ಲ, ಇದನ್ನೊಂದು ಅನುಭವ ಎಂದು ಪರಿಗಣಿಸುತ್ತೇನೆ ಅಷ್ಟೇ ಎಂದೆ. ಮಧ್ಯಾಹ್ನ ಸುಮಾರು ಮೂರೂವರೆ ಘಂಟೆಯ ಹೊತ್ತಿಗೆ, ವಿದ್ಯಾರಣ್ಯ ಎರಡು ಫ್ಲ್ಯಾಕ್ಸ್ ಹಾಳೆಗಳನ್ನಿಡಿದುಕೊಂಡು ಓಡೋಡಿ ಬಂದು, ಏನೋ ಮಗನೇ ಫಿಲಿಪೀನ್ಸ್ ನಲ್ಲಿರುವ ಎ.ಪಿ.ಸಿ ಕಾರ್ಖಾನೆಗೆ ಆಯ್ಕೆ ಮಾಡಿದ್ದಾರಲ್ಲೋ ನಿನ್ನನ್ನು ಎಂದ. ಹೃದಯವೇ ಬಾಯಿಗೆ ಬಂದಂತಾಯಿತು ನನಗೆ! ನಾನೋ ಭಾರತದಲ್ಲಿನ ಎ.ಪಿ.ಸಿ ಗೇ ಲಾಯಕ್ಕಲ್ಲ ಎಂದುಕೊಂಡಿದ್ದರೆ, ಇದೇನು ಆಶ್ಚರ್ಯ? ಎಂದೆ. ಅದಕ್ಕುತ್ತರವಾಗಿ ಅವನು, ಮುರಳೀ ಏನಾದ್ರು ಫಿಲಿಪೀನ್ಸ್ ಬಗ್ಗೆ ಹೇಳಿದ್ರಾ ಎಂದು ಕೇಳಿದ, ನಾನು ಇಲ್ಲವೆಂಬಂತೆ ತಲೆಯಾಡಿಸಿದೆ. ಅವನಿಗೂ ಗೊಂದಲವೆನಿಸಿ, ಸರಿ ಇನ್ನೇನು ಎನ್.ಆರ್.ಐ ಆಗ್ತೀಯಲ್ಲೋ ಮಗನೇ ಏನ್ಮಾಡ್ತೀಯಾ? ಎಂದ. ಮನೇಲಿ ಕೇಳ್ತೀನಿ ಇರು ಎಂದು ಗಾಯತ್ರಿಗೆ ಫೋನಾಯಿಸಿದೆ, ಅವಳೆಂದಳು "ಸರಿ, ಹೋಗಿ ಬನ್ನಿ" ಅಪ್ಪ ಅಮ್ಮನವರ ಸಂತೋಷಕ್ಕೆ ಪಾರವೇ

ಇರಲಿಲ್ಲ! ಅತ್ತೆಯವರಿಗೆ ಒಂದೆಡೆ ಸಂತೋಷ ಮತ್ತೊಂದೆಡೆ ಹೆಂಡತಿ ಮಗನನ್ನು ಬಿಟ್ಟು ದೂರ ಹೋಗುತ್ತಿದ್ದಾನೆಂದು ವ್ಯಥೆ!

ನಾಲ್ಕೂವರೆ ಹೊತ್ತಿಗೆ ಶ್ರೀಯುತ ಮುರಳೀಧರನ್ ಬಂದು, ಪಾಸ್‌ಪೋರ್ಟ್ ಇದೆ ತಾನೆ ಎಂದರು, ನಾನು ಇತ್ತು ಆದರೆ ಎಕ್ಸ್‌ಪೈರ್ ಆಗಿದೆ ಎಂದಿದ್ದಕ್ಕೆ, ತತ್ಕಾಲ್‌ನಲ್ಲಿ ಅಪ್ಲೈ ಮಾಡಿ ಬೇಗ ರೆಡಿಯಾಗಿ, "ಸೀ ಯು ಇನ್ ಮನಿಲ ನೆಕ್ಸ್ಟ ಮಂತ್  ಎಂದು ಹಸ್ತಲಾಘವ ಮಾಡಿ ತೆರಳಿದರು. ಪಾಸ್‌ಪೋರ್ಟ್ ಪಡೆಯಲು ಬೇಕಾದ ಎಲ್ಲಾ ಸಿದ್ಧತೆ ಮಾಡಿಕೊಂಡು ಅರ್ಜಿ ಸಲ್ಲಿಸಲು ಸರಿಯಾಗಿ ಒಂದು ವಾರ ಹಿಡಿಯಿತು. ಆ ವಾರ ಪೂರ್ತಿ ಅರ್.ಇ.ಐ ಎಲೆಕ್ಟ್ರಾನಿಕ್ಸ್‌ಗೆ ಚಕ್ಕರ್, ಏನೋ ಕೆಲಸದ ಮೇಲೆ ಊರಿಗೆ ಹೋಗಬೇಕೆಂದಿದ್ದೆ ಅಷ್ಟೆ. ಅಲ್ಲಿಂದಲೋ ಆಗಾಗ್ಗೆ ಕರೆಗಳು ಬರುತ್ತಿತ್ತು ನನಗೆ ಉತ್ತರಿಸಲು ಭಯ, ಎಲ್ಲಿ ಬಾಯಿ ತಪ್ಪಿ ನಿಜಸ್ಥಿತಿ ಹೇಳಿಬಿಡುವೆನೋ ಎಂದು. ಹಾಗಾಗಿ ಪಾಸ್‌ಪೋರ್ಟ್‌ಗೆ ಅರ್ಜಿ ಸಲ್ಲಿಸುವ ಕೆಲಸ ಮುಗಿಯುವವರೆಗೂ ದೂರವಾಣಿ ಕರೆಗಳಿಗೋಗೊಡಲಿಲ್ಲ. ಪಾಸ್‌ಪೋರ್ಟ್‌ಗೆ ಅರ್ಜಿ ಸಲ್ಲಿಸಿದ ನಂತರ ನೇರವಾಗಿ ರಾಮಸ್ವಾಮಿಯವರನ್ನು ಭೇಟಿ ಮಾಡಲು ಹೋದೆ, ಅವರೋ ಬಹಳ ಕೋಪದಲ್ಲಿದ್ದರು, ಕಾರಣ ಅರಿತಿದ್ದು ಕ್ಷಮೆ ಕೇಳಲು ಗಟ್ಟಿ ಮನಸ್ಸು ಮಾಡಿದ್ದರಿಂದ ಧೈರ್ಯವಿತ್ತು. ತುಂಬಾ ಹೊತ್ತು ಸತಾಯಿಸಿ ಭೇಟಿ ಮಾಡಲು ಅವಕಾಶವಿತ್ತರು. ಕೂಲಂಕಷವಾಗಿ ಎಲ್ಲಾ ವಿವರಿಸಿದೆ, ಸರಿಯಾದ ಸಮಯಕ್ಕೆ ವಿಷಯ ತಿಳಿಸದೆ ಇದ್ದಿದ್ದಕ್ಕೆ ಕ್ಷಮೆ ಯಾಚಿಸಿ ಕೆಲಸ ಬಿಡುವೆನೆಂದೆ. ಅವರು ಹೀಗೆಲ್ಲ ಇದ್ದಕ್ಕಿದ್ದ ಹಾಗೆ ಬಿಡುತ್ತೇನೆಂದರೆ ಒಪ್ಪಲಾಗುವುದಿಲ್ಲ ಕನಿಷ್ಟ ಮೂರು ತಿಂಗಳಿರಬೇಕೆಂದರು. ನಾನು, ನನ್ನ ಜೀವನದಲ್ಲಿ ಮೊದಲನೆ ಬಾರಿ ಇಂತಹ ಅವಕಾಶ ಬಂದಿರುವುದರಿಂದ ಬಿಟ್ಟುಕೊಡಲು ಮನಸ್ಸಿಲ್ಲ, ದಯಮಾಡಿ ಒಪ್ಪಿಗೆ ಕೊಡಿ ಎಂದೆ. ಕಡೆಗೆ ಸುಮಾರು ಮಾತುಕತೆಗಳಾದ ಮೇಲೆ, ಒಂದು ತಿಂಗಳ ನಂತರ ಹೋಗಬಹುದೆಂದರು. ಆ ಒಂದು ತಿಂಗಳಲ್ಲಿ ನನ್ನ ಪಾಸ್‌ಪೋರ್ಟ್ ಸಹ ಕೈ ತಲುಪಿತ್ತು. ಈ ನಡುವೆ ಎ.ಪಿ.ಸಿ ಕಾರ್ಖಾನೆಯ ಮಾನವಸಂಪನ್ಮೂಲ ವಿಭಾಗದ ಸಿಬ್ಬಂದಿಯವರಿಂದ ತಿಳಿದ ವಿಚಾರವೇನೆಂದರೆ, ನೇರವಾಗಿ ಫಿಲಿಪೀನ್ಸ್ ಎ.ಪಿ.ಸಿ ಗೆ ಸೇರಲು ಕೊಂಚ ಅಡಚಣೆ ಇದೆ, ಅದಕ್ಕೆ ಮೊದಲು ಭಾರತದಲ್ಲಿನ ಎ.ಪಿ.ಸಿ ಗೆ ನೇಮಕಾತಿ ಹೊಂದಿ, ಒಂದು ತಿಂಗಳ ನಂತರ ಫಿಲಿಪೀನ್ಸ್‌ಗೆ ವರ್ಗಾವಣೆಯಾಗಬೇಕೆಂದು. ಸರಿ, ಭಾರತದಲ್ಲಿನ ಎ.ಪಿ.ಸಿ ಗೆ ದಾಖಲಾಗಿ ಒಂದು ತಿಂಗಳು ವೀಸಾಕ್ಕೆ ಕಾದದ್ದೆ ಬಂತು, ಕೆಲಸವೇನೂ ಇರಲಿಲ್ಲ, ಕಾರ್ಖಾನೆಯ ಮತ್ತು ಅಲ್ಲಿನ ಉತ್ಪನ್ನಗಳ ಬಗ್ಗೆ ಕೊಂಚ ಅರಿತಂತಾಯಿತು. ಇಷ್ಟೆಲ್ಲಾ ಆಗುವಷ್ಟರಲ್ಲಿ, ಫಿಲಿಪೀನ್ಸ್ ಗೆ ಹೊರಡುವ ದಿನ ನಿಗದಿತವಾಗಿತ್ತು.

ಇನ್ನು ಬೆಳವಾಡಿ ಮನೆಯಲ್ಲಿ, ನನ್ನ ಮೂರನೇ ತಮ್ಮನಾದ ಕುಮಾರ್‌ನ ಮದುವೆಯ ಹವಣಿಕೆಯಲ್ಲಿದ್ದೆವು. ಮೊದಲ ಮೂವರು ಗಂಡು ಮಕ್ಕಳಿಗೆ ಹೊಸ ಸಂಬಂಧದಲ್ಲಿ ಹೆಣ್ಣುಗಳನ್ನು ತಂದಿತ್ತು. ಹಾಗಾಗಿ ಅಮ್ಮನಿಗೆ, ತನ್ನ ತವರು ಮನೆಯ ಕಡೆಯಿಂದ ಹೆಣ್ಣನ್ನು ತರಬೇಕೆಂಬ ಮಹದಾಸೆ! ತಮ್ಮ ಆ ಬಯಕೆಯನ್ನು ಕುಮಾರನಿಗೆ ತಂದ ಹೆಣ್ಣಿನ ಮೂಲಕ ಈಡೇರಿಸಿಕೊಂಡಿದ್ದರು. ಸಂಸಾರ ರಥವನ್ನು ಏರು ಪೇರಾದ ಜೀವನ ದಾರಿಯಲ್ಲಿ ಅಡ್ಡಾ ದಿಡ್ಡಿ ಹಾಯದಿರಲು ಮೂವರು ತಮ್ಮಂದಿರೊಡನೆ ಸಮಾಲೋಚಿಸಿ ಸೂಕ್ತವೆನಿಸಿದ ನಿರ್ಧಾರ ಕೈಗೊಳ್ಳುತ್ತಿದ್ದೆ.



# ಅಧ್ಯಾಯ ೭

## ಬದಲಾವಣೆಯ ಪರಾಕಾಷ್ಠೆ

ನನ್ನ ಮೊದಲ ವಿಮಾನ ಯಾನ!

ದಸರಾ ಹಬ್ಬದ ಪ್ರಯುಕ್ತ, ಪ್ರಪಂಚದೆಲ್ಲೆಡೆಯಿಂದ ಪ್ರವಾಸಿಗರು ಮೈಸೂರಿಗೆ ಆಗಮಿಸುತ್ತಿದ್ದರೆ, ನಾವು ಸ್ನೇಹಿತರೆಲ್ಲಾ ೧೯೮೬ ರಿಂದೀಚೆಗೆ, ನಮ್ಮಪ್ಪನ ಆಸ್ತಿಯನ್ನು ಬಿಟ್ಟು ಕೊಡುವಂತೆ ಮೈಸೂರನ್ನು ಪ್ರವಾಸಿಗರಿಗೇ ಬಿಟ್ಟು ಕೊಟ್ಟು ತಪ್ಪದೆ ಪ್ರತೀವರ್ಷ ಒಂದಲ್ಲಾ ಒಂದು ಹೊರ ರಾಜ್ಯದೆಡೆಗೆ ಪ್ರವಾಸಗೈಯುತ್ತಿದ್ದೆವು! ಪ್ರಯಾಣಕ್ಕೆ ನಾವು ಬಳಸುತ್ತಿದ್ದ ವಾಹನ ಸೌಕರ್ಯವೆಂದರೆ ಬಸ್, ರೈಲು ಅಥವ ಕಾರ್. ಜೀವನದಲ್ಲೊಮ್ಮೆ ವಿಮಾನಯಾನ ಮಾಡಬೇಕೆಂದು ನಾವು ಸ್ನೇಹಿತರೆಲ್ಲಾ ಶತಪ್ರಯತ್ನ ಮಾಡುತ್ತಿದ್ದೆವು, ಕಡೆಗೆ ದಸರಾ ಹಬ್ಬದಲ್ಲಿ ಆಯೋಜಿಸಲಾಗುತ್ತಿದ್ದ ಪುಟ್ಟ ವಿಮಾನದ ಸವಾರಿ ಕೂಡ ಕೈಗೆಟುಕದೆ ಬಹಳ ನಿರಾಸೆಯಾಗಿತ್ತು. ಈಗ ಆ ಅದೃಷ್ಟ ತಾನೇ ತಾನಾಗಿ ಒಲಿದು ಬಂದಿತ್ತು. ವಿಮಾನಯಾನದ ಅನುಭವಕ್ಕೆ ಸಜ್ಜಾದ ಮಾನಸಿಕ ಸಂತೋಷ ಒಂದು ಕಡೆಯಾದರೆ, ಅಲ್ಲಿ ನಿಭಾಯಿಸುವುದು ಹೇಗೋ ಏನೋ ಎಂಬ ಆತಂಕ ಮತ್ತೊಂದೆಡೆ. ಪ್ರಕಾಶ್‌ರಾವ್‌ರವರಿಗೆ ಬೇಕಾದಷ್ಟು ಸಲ ವಿಮಾನಯಾನ ಮಾಡಿದ ಅನುಭವವಿತ್ತು ಹಾಗಾಗಿ, ಅವರಲ್ಲಿ ಸಲಹೆ ಸೂಚನೆಗಳನ್ನು ಕೇಳಲು "ಮೋನಿ, ವಿಮಾನಯಾನದ ಬಗ್ಗೆ ಮತ್ತು ವಿಮಾನ ನಿಲ್ದಾಣದಲ್ಲಿನ ರೀತಿ ರಿವಾಜಿನ ಬಗ್ಗೆ ನಿನಗೇನು ಮಾಹಿತಿ ಇಲ್ಲ. ಅದು ಹಾಗೇ ಇರಲಿ ಬಿಳಿಯ ಹಾಳೆಯ ತರಹ! ಓದೋಕ್ಕೆ ಬರುತ್ತಲ್ಲಾ? ಅಷ್ಟು ಸಾಕು, ಧೈರ್ಯವಾಗಿ ಹೋಗು, ಓದಿಕೊಂಡು ಅನುಸರಿಸು, ಏನು ಆತಂಕ ಬೇಡ" ಎಂದರು.

ಪಕ್ಕದ ನಗರ, ರಾಜ್ಯಗಳಲ್ಲಿ ಬೇರೆ ಹುದ್ದೆಗಳನ್ನಲಂಕರಿಸಲು ಅವಕಾಶವಿದ್ದಾಗ ಹೋಗಬಾರದೆಂದು ನಿರ್ಧರಿಸಿದ್ದವನು ಕುಟುಂಬ, ನೆಂಟರು, ಇಷ್ಟರು ಕಡೆಗೆ

ದೇಶವನ್ನೇ ಬಿಟ್ಟು ಹೊರಡುವ ದಿನ ನನ್ನ ಇಡೀ ಕುಟುಂಬದ ಸದಸ್ಯರು, ಅತ್ತೆಯವರು ಹಾಗು ತಂಗಿಯ ಮನೆಯವರು ನನ್ನನ್ನು ಬೀಳ್ಕೊಡಲು ಬೆಂಗಳೂರಿನ ವಿಮಾನ ನಿಲ್ದಾಣಕ್ಕೆ ಬಂದಿದ್ದರು. ಅವರಿಗೆಲ್ಲಾ ವಿದಾಯ ಹೇಳುವಷ್ಟರಲ್ಲಿ ನನ್ನೊಳಗೆ ದುಃಖ ಮಡುಗಟ್ಟಿತ್ತು, ತೋರಿಸಿಕೊಳ್ಳದೆ ಇರಲು ಬಲು ಪ್ರಯಾಸ ಪಡಬೇಕಾಯಿತಾದರೂ ಕಣ್ಣಂಚಿನಲ್ಲಿ ನೀರು ಜಿನುಗಲು ಶತಪ್ರಯತ್ನ ಪಡುತ್ತಿತ್ತು. ಈ ಹೋರಾಟದಲ್ಲಿ ಅಂತಿಮವಾಗಿ ಖಂಡಿತ ಸೋತವನು ನಾನು!

ವಿಮಾನ ನಿಲ್ದಾಣದ ಕೌಂಟರ್‌ನಲ್ಲಿ ಬೋರ್ಡಿಂಗ್ ಪಾಸ್ ತೆಗೆದುಕೊಳ್ಳುವಾಗ ಮರೆಯದೆ ಕಿಟಕಿಯ ಬಳಿಯ ಆಸನವನ್ನು ಕೇಳಿ ಪಡೆದುಕೊಂಡೆ. ವಿಮಾನಯಾನದ ಅನುಭವವನ್ನು ಸಂಪೂರ್ಣ ಅನುಭವಿಸಲು ಪ್ರಯಾಣ ಆರಂಭಿಸಿದಾಗಲಿನಿಂದ ಹಿಡಿದು ಸಿಂಗಪೂರ್‌ನಲ್ಲಿ ವಿಮಾನ ಬದಲಾಯಿಸಿ, ಮನಿಲಾ ತಲುಪುವವರೆಗೂ ಒಂದು ಕ್ಷಣ ಕೂಡ ಕಣ್ಮುಚ್ಚಿರಲಿಲ್ಲ. ತದನಂತರ ಅಗಣಿತ ವಿಮಾನಯಾನವಾಯಿತು, ಆ ಪ್ರಥಮ ಯಾನದ ಮಜ ಮತ್ತೆಂದೂ ಮರುಕಳಿಸಲಿಲ್ಲ. ಬದಲಿಗೆ ವಿಮಾನ ಯಾನವೆಂದರೆ ಹಿಂಸೆಯ ಅನುಭವ! ಹೊತ್ತಲ್ಲದ ಹೊತ್ತಿನ ಪ್ರಯಾಣದ ಸಲುವಾಗಿ ನಿದ್ರಾಹೀನತೆ, ವಿಮಾನ ಹೊರಡುವ ಸಮಯದ ನಿರೀಕ್ಷೆಯಲ್ಲೇ ಜೀವ ಸವೆಸುವಿಕೆ, ಕಡೆಯ ಕ್ಷಣಗಳಲ್ಲಿ ಆಗುವ ವಿಮಾನಕ್ಕೇರಲು ನಿಗದಿ ಪಡಿಸಿದ ದ್ವಾರಗಳ ಬದಲಾವಣೆ, ವಿಮಾನ ಹೊರಡಲು ಅನಿಯಮಿತ ತಾಸುಗಳ ತಡೆ, ಫಲಿತಾಂಶ ಮುಂದೆ ಬದಲಿಸಬೇಕಾದ ವಿಮಾನದ ನಿರ್ಗಮನದಿಂದ ವಿಮಾನ ನಿಲ್ದಾಣದಲ್ಲೇ ಕೊಳೆಯುವಿಕೆ, ಅರ್ಧಕ್ಕಿಂತ ಹೆಚ್ಚು ದೂರ ಕ್ರಮಿಸಿದ್ದರೂ ವಿಮಾನ ತಲುಪುವ ಜಾಗಕ್ಕೆ ತಲುಪದೇ ತಾನು ತೊರೆದ ವಿಮಾನ ನಿಲ್ದಾಣಕ್ಕೇ ಹಿಂದಿರುಗುವಿಕೆ ಹೀಗೆ ಒಂದೇ ಎರಡೇ??

ಅಂದಹಾಗೆ, ನನ್ನ ಮೊದಲನೇ ಸಲದ ವಿಮಾನಯಾನಕ್ಕೂ ಹಾಗೂ ನಂತರದ ವಿಮಾನಯಾನಗಳಿಗೂ ಹೋಲಿಸಿದಾಗ, ನಾನು ಗಮನಿಸಿದ್ದು ವ್ಯತ್ಯಾಸ ವ್ಯವಸ್ಥೆಯಲ್ಲಿರಲಿಲ್ಲ ಬದಲಿಗೆ ವ್ಯತ್ಯಾಸವಿರುವುದು ನಾನು ವ್ಯವಸ್ಥೆಯನ್ನು ನೋಡುವ ರೀತಿಯಲ್ಲಿ. ಪಟ್ಟಿ ಮಾಡಿದ ಎಲ್ಲಾ ಅವ್ಯವಸ್ಥೆಗಳು ವ್ಯವಸ್ಥೆಯ ಅವಿಭಾಜ್ಯ ಅಂಗವಾದರೂ ಪ್ರಶ್ನೆಯಾಗಿ ಉಳಿಯುವ ವಿಚಾರ, ಹಿಂಸೆ ಪ್ರಥಮ ಬಾರಿಗೆ ಸಂತೋಷವಿತ್ತು ತರುವಾಯ ಹಿಂಸಿಸುವುದು ಯಾಕೆ?

ಫಿಲಿಪ್ಪೀನ್ಸ್, ಏಳುಸಾವಿರಕ್ಕೂ ಮಿಕ್ಕ ದ್ವೀಪಗಳನ್ನು ಹೊಂದಿದ ದೇಶ. ಅಲ್ಲಿನ ಜನರು ಬಲು ಸೌಮ್ಯ ಹಾಗು ದೈನ್ಯತಾ ಸ್ವಭಾವದವರು. ಆಂಗ್ಲ ಭಾಷೆಯನ್ನು ನಿರರ್ಗಳವಾಗಿ ಮಾತನಾಡುವ ಇವರು ಜಗದೆಲ್ಲಾ ರಕ್ತವನ್ನು ಸುಲಭವಾಗಿ

ಜೀರ್ಣಿಸಿಕೊಂಡು ಪ್ರಪಂಚದಲ್ಲೇ ಅತೀ ಅನ್ಯೋನ್ಯತೆಯ ಜನರನ್ನು ಹೊಂದಿರುವ ದೇಶವೆಂದು ಪ್ರಸಿದ್ಧಿ ಪಡೆದಿದೆ! ದೇಶದುದ್ದಕ್ಕೂ ವರ್ಷವಿಡೀ ಒಂದಲ್ಲಾ ಒಂದು ಪ್ರಕೃತಿಯ ವಿಕೋಪಕ್ಕೆ ಗುರಿಯಾಗಿ ಸಂಕಷ್ಟಕ್ಕೆ ಸಿಲುಕಿ ಸದಾ ಜೀವ ಭಯದಿಂದ ತತ್ತರಿಸುತ್ತಿರುವುದರಿಂದಲೇ ಇರಬೇಕು ಅವರ ಜೀವನ ಶೈಲಿ ಮೋಜಿನಿಂದ ಕೂಡಿದ್ದು ನಾಳಿನ ಚಿಂತೆಗೆ ಅಷ್ಟೇನು ಪ್ರಾಮುಖ್ಯತೆ ಇಲ್ಲ! ಕೊಳ್ಳುಬಾಕತನಕ್ಕೆ ಸಂಪೂರ್ಣ ಶರಣಾದ ಇಲ್ಲಿಯ ಜನರು ತಾವು ಸಂಪಾದಿಸಿದ್ದನ್ನೆಲ್ಲಾ ಸಂಬಳ ಬಂದ ದಿನ ಅಥವ ಮಾರನೇ ದಿನವೇ ಖತಂ ಮಾಡುವುದರಲ್ಲಿ ನಿಷ್ಣಾತರು! ಅದಕ್ಕೆಂದೇ ಇರಬೇಕು ದೇಶವಿಡೀ ಕಾರ್ಮಿಕರಿಗೆಲ್ಲಾ ಹದಿನೈದು ದಿನಗಳಿಗೊಮ್ಮೆ ಸಂಬಳ!

ದೇಶದಾದ್ಯಂತ ನಿತ್ಯ ಇರುಳಿನ ಜೀವನ ಬಹಳ ರಂಗಿನಿಂದ ಮೆರೆಯುತ್ತದೆ, ಅದರಲ್ಲೂ ವಾರಾಂತ್ಯಗಳಂತೂ ತಾರಕಕ್ಕೇರುವುದು ಖಚಿತ. ಹಿರಿಯರಿರಲಿ ಕಿರಿಯರಿರಲಿ ಲೈಂಗಿಕ ಚರ್ಚೆಗಳಿಗೇನು ಮಡಿವಂತಿಕೆ ಹಾಗೂ ಕಡಿವಾಣವಿಲ್ಲ. ಪ್ರತ್ಯಕ್ಷವಾಗಿ ಹಾಗು ಪರೋಕ್ಷವಾಗಿ ಎಲ್ಲರೂ ಲೈಂಗಿಕತೆಗೆ ಪುಷ್ಟಿ ಕೊಡುವವರೇ. ಸರ್ಕಾರದ ಪ್ರಮುಖ ಆದಾಯದ ಮೂಲವೇ ಮುಕ್ತ ಲೈಂಗಿಕತೆಗೆ ಒತ್ತು ಕೊಟ್ಟ ಪ್ರವಾಸೋದ್ಯಮ ಮತ್ತು ಪರದೇಶಗಳಲ್ಲಿ ಉದ್ಯೋಗಕ್ಕೆ ತೊಡಗಿಕೊಂಡಿರುವ ಅಲ್ಲಿನ ಪ್ರಜೆಗಳ ವರಮಾನ! ಪುರುಷ ಮತ್ತು ಸ್ತ್ರೀಯರ ಅನುಪಾತ ೧:೩ ಪ್ರಮಾಣದಲ್ಲಿರುವುದರಿಂದ, ಸಾಮಾನ್ಯವಾಗಿ ಸ್ತ್ರೀಯರು, ತಮ್ಮ ಗಂಡಂದಿರನ್ನು ಹದ್ದುಬಸ್ತಿನಲ್ಲಿಡಲು ಹಾಗೂ ಬೇರೆ ಹೆಣ್ಣುಗಳ ಕಡೆಗೆ ಗಮನ ಹರಿಸದಂತೆ ತಡೆಯಲು ತಮ್ಮ ಮೈ ಮಾಟದ ಕಡೆಗೆ ಬಲು ಕಾಳಜಿ ವಹಿಸಿದರೂ ಕಟ್ಟ ಕಡೆಗೆ ಸೋಲನ್ನುಣ್ಣುವರು. ಏಕ ಪೋಷಕರು ಎಂಬ ಹೆಮ್ಮಾರಿಯು ಈ ದೇಶದಲ್ಲಿ ತನ್ನ ಸೆರಗನ್ನು ಎಲ್ಲೆಡೆ ಹಾಸಿರುವುದು ಗಮನಾರ್ಹ. ಸಂಸಾರ ನೊಗದ ಭಾರವೆಲ್ಲಾ ಹೆಣ್ಣು ಮಕ್ಕಳ ಪಾಲಾಗಿರುವುದು ಸರ್ವೇ ಸಾಮಾನ್ಯ! ಇಲ್ಲಿನ ಸರ್ಕಾರವು ತನ್ನ ಪ್ರಜೆಗಳಿಗೆ ಬಹು ಮಕ್ಕಳನ್ನು ಹೆರಲು ಹೇರಳವಾಗಿ ಉತ್ತೇಜನವನ್ನು ತೆರಿಗೆ ವಿನಾಯಿತಿ ಹಾಗು ಇನ್ನಿತರ ಸವಲತ್ತುಗಳೊಂದಿಗೆ ನೀಡಿದೆ.

ಮೊದಲೊಂದು ತಿಂಗಳು ನನ್ನ ವಾಸ್ತವ್ಯ ಪಂಚತ್ತಾರಾ ಹೋಟೆಲ್‌ನಲ್ಲಿ, ಕಾರಣ ಕಾರ್ಖಾನೆಯ ಸಿಬ್ಬಂದಿ ನಾವು ವಾಸಿಸಬೇಕಿದ್ದ ಮನೆಯ ಆಯ್ಕೆಯನ್ನು ಪೂರ್ಣಗೊಳಿಸಿರಲಿಲ್ಲ. ಬೆಳಿಗ್ಗೆ ನಿತ್ಯಕರ್ಮಗಳನ್ನು ಪೂರೈಸಿ ತಿಂಡಿ ತಿಂದು ತಯಾರಿದ್ದರೆ, ನಿಗದಿತ ಸಮಯಕ್ಕೆ ಸರಿಯಾಗಿ ವಾಹನ ಸಿದ್ಧವಾಗಿರುತ್ತಿತ್ತು ನಮ್ಮನ್ನು ಕಾರ್ಖಾನೆಗೆ ಕರೆದೊಯ್ಯಲು. ನಾವಿದ್ದ ಹೋಟೆಲ್‌ನಿಂದ ಕಾರ್ಖಾನೆಗೆ ಒಂದು ಘಂಟೆ ಅವಧಿಯ ಪ್ರಯಾಣ, ಅಂದ ಹಾಗೇ ನನ್ನಂತೆ ಇನ್ನೇಳು ಜನರನ್ನು ಆಯ್ಕೆ

ಮಾಡಿದ್ದರು ಇಲ್ಲಿನ ಕೆಲಸಕ್ಕೆ. ಕ್ರಮೇಣ ಒಬ್ಬೊಬ್ಬರಾಗಿ ಬಂದು ಸೇರಿಕೊಂಡರು. ಮೊದಲ ಮೂರು ತಿಂಗಳಂತೂ ಯಾವ ಜವಾಬ್ದಾರಿಯುತ ಕೆಲಸವಿಲ್ಲದೆ ಮಧುಚಂದ್ರದಂತೆ ಕಳೆದಿತ್ತು. ಕಾರ್ಖಾನೆಯ ಬಗ್ಗೆ ಹಾಗು ಅಲ್ಲಿನ ಉತ್ಪನ್ನಗಳ ಬಗ್ಗೆ ಮಾಹಿತಿ, ನಾವು ಮಾಡಬೇಕಾದ ಕೆಲಸದ ವಿವರ, ಕಾರ್ಖಾನೆಗೆ ಉತ್ಪನ್ನಗಳನ್ನು ಸರಬರಾಜು ಮಾಡುವ ಸರಬರಾಜುದಾರರು ಹಾಗು ಉತ್ಪಾದಕರ ಕಾರ್ಖಾನೆಗಳನ್ನು ಭೇಟಿ ಮಾಡುತ್ತಿದ್ದೆವು. ತರುವಾಯ ನಮ್ಮ ಕೆಲಸ ಆರಂಭಗೊಂಡಿತು. ಎ.ಪಿ.ಸಿ ಫಿಲಿಪೀನ್ಸ್ ಬಹು ಅಗಾಧವಾದ ಕಾರ್ಖಾನೆ, ಕಿರ್ಲೋಸ್ಕರ್ ಅನ್ನು ಹೋಲಿಸುವಂತಿರಲಿಲ್ಲ, ಏಕೆಂದರೆ ಅಲ್ಲಿ ಗುಲಗಂಜಿ ತೂಕದ ವ್ಯಾಪಾರವಾದರೆ ಇಲ್ಲಿ ಮಣಗಟ್ಟಲೆ ವ್ಯವಹಾರ! ಗಾತ್ರ ಏನಾದರೇನು? ಸೂತ್ರ ಒಂದೇ ಎಂಬಂತೆ ಬಳಸುವ ಕರಾಮತ್ತು ಹಾಗು ಚಾಕಚಕ್ಯತೆ ಮುಖ್ಯ! ಆರಂಭದಲ್ಲಿ ನಿರ್ವಹಣೆ ಬಲು ಪ್ರಯಾಸದ್ದಾಗಿತ್ತು ಕ್ರಮೇಣ ಅಭ್ಯಾಸವಾಗಿ ಕರತಲಾಮಲಕವಾಯಿತು. ಮೂಲತಃ ಸಂಕೋಚ ಸ್ವಭಾವದವನಾದ ನನಗೆ, ನಮ್ಮ ಗುಂಪಿನ ೮ ಜನರಲ್ಲಿ ಮಿಕ್ಕಿದವರುಗಳ ಅನುಭವಕ್ಕೆ ಹೋಲಿಸಿದಾಗ ನನ್ನದು ತೀರಾ ಭಿನ್ನ ಮತ್ತು ಕಳಪೆ ಎನ್ನಿಸಿ ಮುಜುಗರದಿಂದ ಕುಗ್ಗಿದ್ದೆ. ಏಕೆಂದರೆ ಅವರೆಲ್ಲಾ ಭಾರತದಲ್ಲಿನ ಹೆಸರಾಂತ ಬಹು ರಾಷ್ಟ್ರೀಯ ಕಾರ್ಖಾನೆಗಳಲ್ಲಿ ದುಡಿದು ಬಂದವರಾಗಿದ್ದರು! ನಾನೋ ಮೈಸೂರಿನ ಬೆಳವಾಡಿಯಲ್ಲಿರುವ ಕಿರ್ಲೋಸ್ಕರ್‌ನಲ್ಲಿ ಹದಿನಾರುವರೆ ವರ್ಷ ಮಣ್ಣು ಹೊತ್ತಿದ್ದವನು! ಆದರೆ ಮುಂದುವರೆದಂತೆ ಅರಿವಾಗಿದ್ದು, ಹೊತ್ತಿದ್ದ ಮಣ್ಣು ಬಲು ಗಟ್ಟಿಮುಟ್ಟಾದ ಅಡಿಪಾಯವಾಗಿತ್ತು, ಜೊಳ್ಳೆಂಬುದೇ ಇರಲಿಲ್ಲ. ಕಿರ್ಲೋಸ್ಕರ್‌ನಲ್ಲಿ ವೈಯಕ್ತಿಕವಾಗಿ ಏನೇ ಕೆಡುಕುಗಳೆನಿಸಿದ್ದರೂ ನನ್ನ ಬೆನ್ನ ಮೇಲೆ ಕಾರ್ಖಾನೆಯು ಹೊರಿಸಿ ಕಳುಹಿಸಿದ್ದ ಅನುಭವದ ಮೂಟೆ ಮಾತ್ರ ಅಕ್ಷಯ ಪಾತ್ರೆಯಂತಿದ್ದು ಸದಾ ಕಾಪಾಡುತ್ತಿತ್ತು. ಇಲ್ಲಿಯೂ ಸಹ ಕಾರ್ಖಾನೆಯ ವಿವಿಧ ವಿಭಾಗಗಳ ಆಗು ಹೋಗುಗಳನ್ನು ತಿಳಿಯಲು ಅನಿರ್ಬಂಧ ವೇದಿಕೆ ಇತ್ತು, ಕಲಿಯುವ ಉತ್ಸುಕತೆಗೇನು ಕುತ್ತು ಇರಲಿಲ್ಲ, ಫಲಿತಾಂಶ ತಲೆಯಲ್ಲಿ ವ್ಯವಹಾರದ ಕಾರ್ಯವೈಖರಿ ಮತ್ತು ಕಾರ್ಯವನ್ನು ಸಮಯ ಸಂದರ್ಭಗಳಲ್ಲಿ ನಿಭಾಯಿಸುವ ತಂತ್ರ ನಿರಂತರವಾಗಿ ಸ್ಥಿರವಾಗಿ ಅಚ್ಚೊತ್ತುತ್ತಿತ್ತು.

ತಿಂಗಳು ಕಳೆಯುತ್ತಿದ್ದಂತೆ ಕಾರ್ಖಾನೆಯ ವತಿಯಿಂದ ನಾವು ವಾಸಿಸಲು ಎರಡು ಬಂಗಲೆಗಳನ್ನು ಗೊತ್ತು ಮಾಡಿದ್ದರು. ಒಂದೊಂದು ಬಂಗಲೆಯಲ್ಲಿ ತಲಾ ನಾಲ್ಕು ಮಂದಿ. ನಾನಿದ್ದ ಬಂಗಲೆಯು ಯೂರೋಪ್ ವಾಸ್ತುಶೈಲಿಯಲ್ಲಿ ನಿರ್ಮಿಸಲಾಗಿದ್ದು ಸಂಪೂರ್ಣ ಪೀಠೋಪಕರಣಗಳಿಂದ ಸುಸಜ್ಜಿತವಾಗಿದ್ದುದ್ದಲ್ಲದೇ ಐದು ವಿಶಾಲವಾದ ಐಷಾರಾಮಿ ಮಲಗುವ ಕೋಣೆಗಳಲ್ಲದೇ, ಅಡುಗೆಯವರಿಗೆ

ಮತ್ತು ವಾಹನ ಚಾಲಕರಿಗೆಂದೇ ಎರಡು ಪ್ರತ್ಯೇಕ ಕೋಣೆಗಳೊಡನೆ ವಿಶಾಲವಾದ ಪಡಸಾಲೆ, ಮನೆಯ ಮುಂದೆ ಸಿಟ್ ಔಟ್, ಪುಟ್ಟ ಮೀನಿನ ಕೊಳದ ಜೊತೆಗೆ ಮನೆಯ ಹಿಂದೆ ವಿಶಾಲವಾದ ಈಜುಕೊಳವನ್ನು ಹೊಂದಿತ್ತು! ಮನೆಯ ಬಾಡಿಗೆ ಕಾರ್ಖಾನೆಯವರ ಜವಾಬ್ದಾರಿ. ನಾವು ವಿದ್ಯುತ್, ನೀರು ಹಾಗೂ ಮನೆಕೆಲಸದವಳ ಪಗಾರದ ಖರ್ಚನ್ನು ಭರಿಸಬೇಕಿತ್ತು. ಮೂರೇ ವಾರಕ್ಕೆ ನಮ್ಮ ಮನೆಯ ಕೆಲಸದಾಕೆ ಭಾರತ ಶೈಲಿಯ ತಿಂಡಿ, ಅಡುಗೆ ಮಾಡುವುದರೊಂದಿಗೆ ನಾಲ್ಕೂ ಜನರ ಬಟ್ಟೆಗಳನ್ನು ಒಗೆದು ಇಸ್ತ್ರಿ ಮಾಡಿ ಇಡೀ ಮನೆಯನ್ನು ಬಲು ನಾಜೂಕಾಗಿ ಇಡುತ್ತಿದ್ದಳು. ನನಗೆ ಆ ಬಂಗಲೆಯಲ್ಲಿ ವಾಸಿಸುವಾಗ ನೆನಪಾಗುತ್ತಿದ್ದದ್ದು ಹಿಂದಿನ ದನದ ಕೊಟ್ಟಿಗೆಯನ್ನು ಮಾರ್ಪಡಿಸಿ ಜನರು ವಾಸಿಸಲು ಬಾಡಿಗೆಗೆ ಕೊಟ್ಟಿದ್ದ ಮನೆಯಲ್ಲಿನ ವಾಸ! ಅವಕಾಶವಾದಾಗಲೆಲ್ಲಾ ಮನಿಲಾದ ಸುತ್ತಾಮುತ್ತಾ ಇದ್ದ ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿ ನೀಡುತ್ತಿದ್ದೆವು. ಅಂತಹವುಗಳಲ್ಲಿ ಉಲ್ಲೇಖಾರ್ಹವಾದದ್ದು ತಗಾಯ್ತಾಯ್ ಎನ್ನುವ ಜೀವಂತ ಅಗ್ನಿಪರ್ವತ. ಹೇಳಿ ಕೇಳಿ ದ್ವೀಪಗಳ ದೇಶ, ಕೆಲವು ಸಮುದ್ರ ತೀರಗಳನ್ನು ವೀಕ್ಷಿಸಿದ್ದಾಗಿತ್ತು.

ಕಾರ್ಖಾನೆಯಲ್ಲಿ ಫಿಲಿಪೀನ್ಸ್ ಸಹೋದ್ಯೋಗಿಗಳೊಂದಿಗೆ ಒಡನಾಡುವಾಗ ಗಮನಿಸಿದ ಪ್ರಮುಖ ಅಂಶವೆಂದರೆ ಅವರ ನಿರಾಳ ಮನೋಭಾವವಲ್ಲದೇ ಉದ್ಯೋಗ ಹಾಗೂ ವೈಯಕ್ತಿಕ ಜೀವನಗಳ ನಡುವಿನ ಅಂತರ ಕಾಪಾಡಿಕೊಳ್ಳುವಿಕೆ! ಕರ್ತವ್ಯಕ್ಕೆ ಸಂಬಂಧಪಟ್ಟ ಯಾವುದೇ ಗಹನವಾದ ವಿಚಾರದ ಬಗ್ಗೆ ಚರ್ಚೆ ನಡೆಯುತ್ತಿರುವ ಸಮಯದಲ್ಲಿ ಊಟದ ವಿರಾಮ ಅಡ್ಡ ಬಂದರೆ ಅಥವಾ ಕೆಲಸದ ವೇಳೆಯ ಅವಧಿ ಮುಗಿಯುವ ಹಂತಕ್ಕೆ ಬಂದರೆ ಯಾವುದೇ ಎಗ್ಗಿಲ್ಲದೇ ಚರ್ಚಿಸುತ್ತಿರುವ ಮುಖ್ಯಸ್ಥರಿಗೆ ವಿರಾಮದ ಅವಧಿ ಹಾಗೂ ಕೆಲಸದ ಅವಧಿ ಮುಗಿಯುತ್ತಿರುವ ಬಗ್ಗೆ ನೆನಪಿಸಿ ಚರ್ಚೆಯನ್ನು ವಿರಾಮದ ಬಳಿಕ ಅಥವ ಮಾರನೇ ದಿನ ಮುಂದುವರಿಸಲು ಸಲಹೆ ನೀಡುವರು. ಕರ್ತವ್ಯ ನಿರ್ವಹಣೆಯ ಅವಧಿ ಮುಗಿಸಿ ಕಾರ್ಖಾನೆಯಿಂದ ಹೊರ ಬರುತ್ತಿದ್ದ ಹಾಗೆ ಕರ್ತವ್ಯಕ್ಕೆ ಸಂಬಂಧಿಸಿದ ಯಾವುದೇ ಗುರುತರವಾದ ವಿಚಾರವಿರಲಿ ಅದನ್ನು ಮನಸಿನಿಂದ ಸಂಪೂರ್ಣ ತೊಡೆದು ಹಾಕಿ ವೈಯಕ್ತಿಕ ಅಥವಾ ಇತರ ಸಾಮಾನ್ಯ ವಿಚಾರಗಳ ಬಗ್ಗೆ ಚರ್ಚಿಸುತ್ತಾರೆ! ನಾನಾದರೋ ದಿನದ ಇಪ್ಪತ್ತನಾಲ್ಕು ಘಂಟೆಯೂ ಸದಾ ಕಾರ್ಖಾನೆಯ ಕರ್ತವ್ಯದ ಬಗ್ಗೆ ಚಿಂತಿಸಿ ವೈಯಕ್ತಿಕ ಜೀವನದೆಡೆಗೆ ನಿರ್ಲಕ್ಷ್ಯ ತೋರುವ ನನ್ನ ಸ್ವಾಭಾವಿಕ ಗುಣದ ಅನುಸಾರ ಅವರೊಂದಿಗೆ ಕಾರ್ಖಾನೆಗೆ ಸಂಬಂಧಪಟ್ಟ ವಿಷಯ ಪ್ರಸ್ತಾಪಿಸಿದರೆ, ನಾವೀಗ ಕಛೇರಿಯಲ್ಲಿಲ್ಲ, ಅದರ ಬಗ್ಗೆ ಚರ್ಚಿಸಿ ಏನೂ ಪ್ರಯೋಜನವಿಲ್ಲ. ಹೇಗೂ ನಾಳೆ ನಾವೇ ಆ ಕರ್ತವ್ಯವನ್ನು ನಿಭಾಯಿಸಬೇಕು,

ಆಗ ಚರ್ಚಿಸಿದರಾಯಿತು ಎನ್ನುವರು ನಿರ್ವಿಕಾರದಿಂದ. ಅವರ ಈ ಮನೋಭಾವವನ್ನು ಮೈಗೂಡಿಸಿಕೊಳ್ಳಲು ಸುಮಾರು ಇಪ್ಪತ್ತು ವರ್ಷಗಳಿಂದ ಅನುಸರಿಸಿಕೊಂಡು ಬಂದಿದ್ದ ನಡೆನುಡಿಯನ್ನು ಬದಲಾಯಿಸಿಕೊಳ್ಳುವ ವ್ಯರ್ಥಪ್ರಯತ್ನ ಪಡುವುದೊಂದೇ ನನಗುಳಿದ್ದಿದ್ದು. ನಮ್ಮ ವಿಭಾಗಾಧಿಕಾರಿ ಮುರಳೀಧರನ್ ಯಾವಾಗಲೊಮ್ಮೆ ಫಿಲಿಪೀನ್ಸ್ ಸಹೋದ್ಯೋಗಿಗಳೊಂದಿಗೆ ಚರ್ಚಿಸುತ್ತಿರುವ ವೇಳೆಯಲ್ಲಿ ಅವರನ್ನು ಈ ರೀತಿ ಗೇಲಿ ಮಾಡುತ್ತಿದ್ದುದ್ದುಂಟು ನೀವು ಫಿಲಿಪಿನೊಗಳು ವಾರಕ್ಕೆ ಕೆಲಸ ಮಾಡುವುದು ಒಂದೇ ದಿನ, ಅದು ಬುಧವಾರ ಮಾತ್ರ. ಏಕೆಂದರೆ ಶನಿವಾರ ಹಾಗೂ ಭಾನುವಾರ ವಾರಾಂತ್ಯಕ್ಕೆ ಮೀಸಲು, ಸೋಮವಾರ ಮತ್ತು ಮಂಗಳವಾರ ವಾರಾಂತ್ಯದ ಮತ್ತಿನಲ್ಲಿರುವುದು, ಗುರುವಾರ ಮತ್ತು ಶುಕ್ರವಾರ ವಾರಾಂತ್ಯದ ಕಾರ್ಯಕ್ರಮದ ಬಗ್ಗೆ ಚರ್ಚೆ! ಅದಕ್ಕೆ ಪ್ರತ್ಯುತ್ತರವೆಂಬಂತೆ ಸಹೋದ್ಯೋಗಿಗಳು  ಹೌದು ಮತ್ತೆ, ಮೊದಲು ನಾವು ಸಂತೋಷವಾಗಿದ್ದರೆ ತಾನೇ ಮಿಕ್ಕೆಲ್ಲಾ ಕಾರ್ಯಗಳನ್ನು ಸುಗಮವಾಗಿ ನೆರವೇರಿಸಲು ಸಾಧ್ಯ ಎಂದು ಮರು ಸವಾಲು ಹಾಕುವರು!

ಅಣೆಕಟ್ಟು ಒಡೆದಾಗ ಹರಿಯುವ ನೀರಿನಂತೆ ಕೆಲಸ ಸಾಗಿತ್ತು, ಆಗ್ಗೆ ಆರು ತಿಂಗಳಾಗಿ ರಜದ ಸಲುವಾಗಿ ಭಾರತಕ್ಕೆ ಹಿಂತಿರುಗುವ ಅವಕಾಶ! ಸಂತೋಷದಿಂದ ಜಿಗಿಯುವಂತಾಗಿತ್ತು ಮತ್ತೆ ಮನೆಯವರೊಡನೆ, ಸ್ನೇಹಿತರೊಡನೆ ಬೆರೆಯುವೆನೆಂದು. ಭಾರತದಲ್ಲಿ ಕಳೆದ ಹದಿನೈದು ದಿನಗಳು ಮಿಂಚಂತೆ ಮಾಯವಾಗಿ ಫಿಲಿಪೀನ್ಸ್‌ಗೆ ವಾಪಸ್ಸಾಗಿ ಮತ್ತೆ ಯಥಾ ಪ್ರಕಾರ ಕರ್ತವ್ಯದ ದಿನಚರಿ ಆರಂಭವಾಗಿತ್ತು. ಖೇದದ ಸಂಗತಿ ಎಂದರೆ ನಮ್ಮ ತಂಡದಲ್ಲಿದ್ದ ೮ ಸದಸ್ಯರಲ್ಲಿ, ನಾಲ್ಕು ಸದಸ್ಯರಷ್ಟೇ ವಾಪಸ್ಸಾಗಿದ್ದು. ಮಿಕ್ಕವರೆಲ್ಲ ರಜಕ್ಕೆಂದು ಹೋದವರು ಹಾಗೇ ಪಲಾಯನಗೈದಿದ್ದರು. ಕಾರ್ಖಾನೆಯಲ್ಲಿ ನಮ್ಮ ತಂಡದ ಬಗ್ಗೆ ಎಲ್ಲರೂ ಆಡಿಕೊಳ್ಳುವಂತಾಗಿ ಬಹಳ ಮುಜುಗರ ತಂದಿತ್ತು. ಕ್ಷೀಣಿಸಿದ ಸದಸ್ಯರ ಸಂಖ್ಯೆಯಿಂದಾಗಿ ಉಳಿದವರ ಮೇಲೆ ಹೆಚ್ಚಿನ ಕೆಲಸದ ಒತ್ತಡ ಬೀಳುವಂತಾಯಿತು! ನಿಧಾನವಾಗಿ ಖಾಲಿಯಾದ ಜಾಗಗಳು ಭರ್ತಿಯಾದವು. ಒಂದು ವರ್ಷದ ಅಂಚಿಗೆ ತಲಪುವ ಹೊತ್ತಿಗೆ, ಅಲ್ಲಿನ ಏಕತಾನತೆಯ ಜವಾಬ್ದಾರಿ, ಮಿತಿ ಮೀರಿದ ಕೆಲಸದ ಒತ್ತಡ, ಬೆಳಿಗ್ಗೆ ಎಂಟರಿಂದ ರಾತ್ರಿ ಎಂಟರವರೆಗೆ, ಸೋಮವಾರದಿಂದ ಶನಿವಾರದವರೆಗೆ ನಿರಂತರವಾಗಿ ಸಾಗುತ್ತಿದ್ದ  ಅದೇ ರಾಗ ಅದೇ ಹಾಡು  ಸಾಕೆನಿಸಿತ್ತು, ತಡೆರಹಿತ ಯಾಂತ್ರಿಕತೆಗೆ ಜೀವ ಬೇಸತ್ತಿತ್ತು. ಮೂವತ್ತೊಂಬತ್ತನೇ ವಯಸ್ಸಿನಲ್ಲಿ ಪ್ರಪ್ರಥಮ ಬಾರಿಗೆ, ಮನೆ, ಮಠ, ನನ್ನವರು, ತನ್ನವರು, ಊರು ಮತ್ತು ದೇಶವನ್ನು ಬಿಟ್ಟು, ಪರದೇಶಿಯಂತೆ ಯಾಕೆ ಕೊಳೆಯುತ್ತಿದ್ದೇನೋ ಎನಿಸಿ ಮುಕ್ತಿ ಹೇಗೆ ಎಂದುಕೊಂಡು, ವರ್ಷ

ಕಳೆಯುತ್ತಿದ್ದ ಹಾಗೇ ವಾಪಸ್ ಹೊರಡಲು ಮಾನಸಿಕವಾಗಿ ನಿರ್ಧರಿಸಿಯಾಗಿತ್ತು. ತಕ್ಕ ಸಮಯಕ್ಕೆ ಕಾಯುತ್ತಿದ್ದೆ ನನ್ನ ನಿರ್ಧಾರವನ್ನು ಮೇಲಧಿಕಾರಿಗೆ ತಿಳಿಸಲು...

ಆಗ ಬಂತು ಬದಲಾವಣೆಯ ಆಹ್ವಾನ ಶ್ರೀಯುತ ಪೋ ಚೀ ಚಾಂಗ್ ರವರು "ಮೋಹನ್, ನೀವು ಚೀನಾದಲ್ಲಿರುವ ನಮ್ಮ ಕಾರ್ಖಾನೆಗೆ ಯಾಕೆ ಸೇರ್ಕೋಬಾರ್ದು?" ಎಂದು ಹೇಳುವ ಮೂಲಕ!

ಆ ದಿನ ನನ್ನ ಮೇಲಧಿಕಾರಿಯ ಕೋಣೆಯಲ್ಲಿ, ಒಂದು ಪ್ರಾಜೆಕ್ಟ್‌ಗೋಸ್ಕರ ಪ್ಲಾಸ್ಟಿಕ್ ಅಚ್ಚು ಮತ್ತು ಉತ್ಪನ್ನಗಳ ದರದ ಬಗ್ಗೆ ತೀರ್ಮಾನಿಸಲು ಮಾತುಕತೆ ನಡೆಯುತ್ತಿತ್ತು. ಎ.ಪಿ.ಸಿ ವತಿಯಿಂದ ನನ್ನ ಮೇಲಧಿಕಾರಿ ಮತ್ತು ನಾನು, ಮಾರಾಟಗಾರರ ಕಡೆಯಿಂದ ಪೋ.ಚೀ ಚಾಂಗ್ ಹಾಗು ಜಿಮ್ಮಿ ಎಂಬುವರು ಭಾಗವಹಿಸಿದ್ದೆವು. ಸುಮಾರು ಒಂದೂವರೇ ತಾಸಿನ ಚೌಕಾಶಿ ಮಾತುಕತೆಯ ನಂತರ ದರದ ಬಗ್ಗೆ ಎರಡೂ ಕಡೆ ಸಮ್ಮತವಾಯಿತು. ನಂತರ ಸಾಮಾನ್ಯ ವಿಷಯಗಳ ಚರ್ಚೆ ನಡೆಯುತ್ತಿದ್ದಾಗ, ಇದ್ದಕ್ಕಿದ್ದ ಹಾಗೆ ಚಾಂಗ್, ನನ್ನನ್ನು ಅವರ ಚೀನಾದ ಕಾರ್ಖಾನೆಗೆ ಆಹ್ವಾನವಿತ್ತಿದ್ದರು! ಈತ ತೈವಾನಿ ಮೂಲದವರು, ತೈವಾನ್, ಚೀನಾ ಹಾಗು ಫಿಲಿಪೀನ್ಸ್‌ನಲ್ಲಿ ಸ್ಥಾಪಿಸಿದ್ದ ಕಾರ್ಖಾನೆಗಳ ಸಮೂಹದ ಮಾಲೀಕರು. ನನ್ನ ಅವರ ಭೇಟಿ ಇತ್ತೀಚಿನ ನಾಲ್ಕು ತಿಂಗಳಲ್ಲಿ ಕಾರ್ಖಾನೆಯ ವ್ಯವಹಾರದ ಸಲುವಾಗಿ ಎರಡು ಸಲವಾಗಿತ್ತು. ಎರಡನೇ ಭೇಟಿಯಲ್ಲೇ ಈ ಆಹ್ವಾನ. ಅದೇನನ್ನು ಗಮನಿಸಿದ್ದರೋ ನನ್ನಲ್ಲಿ ತಿಳಿಯಲಿಲ್ಲ, ಅವಾಕ್ಕಾದ ನಾನು ತಕ್ಷಣಕ್ಕೇನು ಉತ್ತರ ಹೊಳೆಯದೆ, ನಾನಿಲ್ಲಿ ಸಂತೋಷವಾಗಿದ್ದೇನೆ ಅವಕಾಶಕ್ಕೆ ಧನ್ಯವಾದ ಎಂದಷ್ಟೇ ತಿಳಿಸಿದೆ. ರಾತ್ರಿ ಮನೆ ತಲುಪುವಷ್ಟರಲ್ಲಿ ಬದಲಾವಣೆಯ ಆಹ್ವಾನದ ಹುಳುವಿನ ಕೊರೆತ ತಾರಕಕ್ಕೇರಿತ್ತು. ಏನಾಗುತ್ತಿದೆ? ಭಾರತಕ್ಕೆ ಹಿಂದಿರುಗಲು ನಿರ್ಧರಿಸಿಯಾಗಿತ್ತು. ಈಗ ಚೀನಾಕ್ಕೆ ಆಹ್ವಾನ, ಏನು ಮಾಡುವುದು? ವಾಪಸ್ ಹೋಗಿ ಮತ್ತೆ ಕೆಲಸದ ಬೇಟೆಯಾಡಬೇಕು, ಹೇಗೂ ಪರದೇಶಿಯಾಗಿದ್ದೇನೆ, ಈಗಾಗಲೇ ಮನೆಯವರಿಂದ ನಾಲ್ಕುವರೆ ಸಾವಿರ ಕಿಲೋಮೀಟರ್ ದೂರದಲ್ಲಿದ್ದೇನೆ, ಮೇಲೆ ಇನ್ನೊಂದೈನೂರು ಕಿಲೋಮೀಟರ್ ಹೆಚ್ಚು ದೂರವಾದರೇನು? ವಾಪಸ್ ಹೋಗುವ ಮುಂಚೆ ಇದನ್ನೂ ಒಂದು ಕೈ ನೋಡಿಯೇ ಹೋಗೋಣ, ಅವಕಾಶ ತಾನಾಗೇ ಹುಡುಕಿಕೊಂಡು ಬಂದಿದೆ. ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಂಡರು ಎಂಬಂತೆ ಆಗಬಾರದೆಂದು, ಚೀನಾದ ದಾರಿ ಹಿಡಿಯಲು ಮನಸ್ಸು ಗಟ್ಟಿ ಮಾಡಿದೆ. ಮಾರನೇ ದಿನ ಮೇಲಧಿಕಾರಿಗೆ ನನ್ನ ನಿರ್ಧಾರದ ಬಗ್ಗೆ ವಿವರಿಸಿದೆ, ಅವರಿಗೂ ಎ.ಪಿ.ಸಿ ಯಲ್ಲಿನ ನನ್ನ ಪರಿಸ್ಥಿತಿ ಅರ್ಥವಾಗಿತ್ತು, ಹಾಗಾಗಿ, ಬದಲೀ ವ್ಯವಸ್ಥೆ ಆದ ಮೇಲೆ ಹೋಗು ಎಂದರು. ತಕ್ಷಣ ಚಾಂಗ್‌ರವರಿಗೆ ನನ್ನ ನಿರ್ಧಾರ ತಿಳಿಸಿದೆ

ನಂತರ ಚೀನಾದ ಕಾರ್ಖಾನೆಯಲ್ಲಿನ ನನ್ನ ಜವಾಬ್ದಾರಿ ಹಾಗು ವೇತನದ ಬಗ್ಗೆ ಮಾತುಕತೆಯಾಗಿ ಇಬ್ಬರೂ ಒಂದು ಒಪ್ಪಂದಕ್ಕೆ ಬಂದೆವು.

ಸರಿಯಾಗಿ ಒಂದು ವರ್ಷ ಒಂದು ತಿಂಗಳಾದ ಮೇಲೆ ಫಿಲಿಪೀನ್ಸ್‌ಗೆ ವಿದಾಯ ಹೇಳುವ ಸಮಯ..... ನನ್ನ ಸ್ಥಳ, ಕೆಲಸದ ಬದಲಾವಣೆಯ ಬಗ್ಗೆ ಮನೆಯಲ್ಲಿ ಏನಂಥಾ ಕಳವಳವಿರಲಿಲ್ಲ. ಆದರೆ ಸ್ನೇಹಿತರಿಗೆ, ಸಹೋದ್ಯೋಗಿಗಳಿಗೆ ಅಚ್ಚರಿ, ಬೇಸರ ಅದರಲ್ಲೂ ವಿದ್ಯಾರಣ್ಯನಿಗಂತೂ ನುಂಗಲಾರದ ತುತ್ತು. ಇವನಿಗೇನೋ ತಲೆ ಕೆಟ್ಟಿದೆ ಎಂದುಕೊಂಡು ಫೋನಾಯಿಸಿ ಏನೋ ಮಗನೆ ಏನಾಯಿತು? ಎಂದ. ಅವನಿಗೆ ನಾನು ಎ.ಪಿ.ಸಿ ಬಿಡುವ ವಿಷಯವಷ್ಟೇ ತಿಳಿದಿತ್ತು, ಆದರೆ ಮುಂದೇನು ಎನ್ನುವುದರ ಬಗ್ಗೆ ಮಾಹಿತಿ ಇರಲಿಲ್ಲ. ನನಗೂ ಕಟ್ಟಪ್ಪಣೆಯಾಗಿತ್ತು, ನನ್ನ ಮೇಲಧಿಕಾರಿಯಿಂದ– ಚೀನಾದಲ್ಲಿನ ಹುದ್ದೆಗೆ ದಾಖಲಾಗುವವರೆಗೂ ಯಾರಲ್ಲೂ ಬಾಯಿ ಬಿಡಬೇಡ, ಕಲ್ಲು ಹಾಕುವ ಮಂದಿ ಬೇಕಾದಷ್ಟು ಇರುತ್ತಾರೆ ಎಂದು. ಹಾಗಾಗಿ, ವಿದ್ಯಾರಣ್ಯನಿಗೆ, ಸಾಕು ಇಲ್ಲಿನ ಸಹವಾಸ ಎಂದೆನಿಸಿ ಬಿಡುತ್ತಿದ್ದೇನೆ ಮುಂದೇನು ಎಂದು ಸ್ವಲ್ಪ ದಿನಗಳ ನಂತರ ತಿಳಿಸುವೆನೆಂದೆ, ಅರ್ಥವಾಗಿರಬೇಕು ಸುಮ್ಮನಾದ.



# ಅಧ್ಯಾಯ ೮

## ಬಾನೆತ್ತರಕೆ ಜಿಗಿತ

ಭಾರತಕ್ಕೆ ಮರಳಿ ಬಂದು ವೀಸಾ ಪಡೆದು ಚೀನಾಕ್ಕೆ ಹೊರಡಲು ಒಂದೂವರೆ ತಿಂಗಳ ಸಮಯ ಹಿಡಿಯಿತು..

ನಾನು ಪ್ರಯಾಣಿಸುತ್ತಿದ್ದ ವಿಮಾನ, ಶಾಂಘೈ ಸಮೀಪಿಸುತ್ತಿದೆ ಎಂಬುದನ್ನು ಅರಿತು ಕಿಟಕಿಯಿಂದ ಹೊರಗೆ ಪರೀಕ್ಷಾತ್ಮಕವಾಗಿ ಕಣ್ಣುಗಳನ್ನು ದೊಡ್ಡದಾಗಿ ಅರಳಿಸಿ ಚೀನಾದ ಮಹಾ ಗೋಡೆ ಕಾಣಿಸುವುದೇನೋ ಎಂದು ಹುಡುಕುತ್ತಿದ್ದೆ!

ಚಂದ್ರನ ಮೇಲ್ಮೈನಿಂದ ಬರೀಗಣ್ಣಿಗೆ ಕಾಣುವ ಮಾನವ ನಿರ್ಮಿತ ಕಟ್ಟಡವಾದ ಚೀನಾದ ಮಹಾ ಗೋಡೆ, ಶಾಂಘೈ ಮೇಲೆ ಹಾರಾಡುವ ವಿಮಾನದಿಂದ ಕಾಣಿಸುವುದಿಲ್ಲ ಎಂಬ ಸತ್ಯ ನಂತರ ಅರಿವಾಗಿ ನಗು ಬಂತು!

ನಾನು ದಾಖಲಾಗಲಿದ್ದ ಕಾರ್ಖಾನೆಯ ವಾಹನ ಚಾಲಕ ವಿಮಾನ ನಿಲ್ದಾಣಕ್ಕೆ ಬಂದಿದ್ದ ನನ್ನನ್ನು ಕರೆದೊಯ್ಯಲು. ಅಲ್ಲಿಂದ ಎರಡು ತಾಸು ಪ್ರಯಾಣ ನಾನು ಕೆಲಸ ಮಾಡಲು ಹೋಗುತ್ತಿದ್ದ ಜಾಗ, ಅದರ ಹೆಸರು ಸೂಜೌ ಎಂದು. ಇದನ್ನು ದೀಪಗಳ ನಗರ ಎನ್ನುವರು. ಕತ್ತಲಾಗುತ್ತಿದ್ದಂತೆ ಇಡೀ ನಗರ ಕಲಾತ್ಮಕವಾದ ಕಣ್ಸೆಳೆಯುವ ವಿದ್ಯುತ್ ದೀಪಗಳಿಂದ ಜಗಮಗಿಸುವುದು. ನಗರವಿಡೀ ನೀರಿನ ಕಾಲುವೆಗಳನ್ನೊಳಗೊಂಡ ಪರಿಣಾಮ ಈ ನಗರವನ್ನು ಪೂರ್ವದ ವೆನಿಸ್ ಎಂತಲೂ ಕರೆಯುತ್ತಾರೆ. ಈ ನಗರಕ್ಕೆ ಎರಡು ಸಾವಿರದ ಐನೂರು ವರ್ಷಗಳ ಇತಿಹಾಸವಿದೆ! ಹಳೇ ಬೇರು, ಹೊಸ ಚಿಗುರು ಎನ್ನುವಂತೆ, ಸಾಕಷ್ಟು ಪ್ರಾಚೀನ ಉದ್ಯಾನಗಳು, ದೇವಸ್ಥಾನಗಳು, ಪುನಃರುಜ್ಜೀವನಗೊಂಡ ಪುರಾತನ ಪುರಗಳನ್ನು ಹೊಂದಿರುವುದಲ್ಲದೆ ಆಧುನಿಕತೆಗೆ ಸಾಕ್ಷಿಯೆಂಬಂತೆ ನಗರದೆಲ್ಲೆಡೆ ಗಗನಚುಂಬಿಗಳು

ಹರಡಿವೆ. ಇವೆಲ್ಲಕ್ಕೂ ಪುಟವಿಟ್ಟಂತೆ ಇಡೀ ನಗರ ಬೆಟ್ಟ, ಗುಡ್ಡಗಳಿಂದ ಆವರಿಸಲ್ಪಟ್ಟು ಪ್ರವಾಸಿಗರ ಸ್ವರ್ಗ ಎನಿಸಿದೆ. ನಗರವಿಡೀ ಹರಡಿರುವ ವಿಶಾಲವಾದ ನಾಲ್ಕು ಅಥವಾ ಆರು ಪಥಗಳ ರಸ್ತೆಗಳಂತೂ ಅಕ್ಕ ಪಕ್ಕದಲ್ಲಿನ ನಿಯತ ಕಾಲಕ್ಕೆ ಆರೈಕೆಗೊಂಡು ನಳನಳಿಸುವ ಗಿಡ ಪೊದರುಗಳಿಂದ ಸಿಂಗರಿಸಿಕೊಂಡು ಸುಸ್ಥಿತಿಯಲ್ಲಿದೆ. ರಸ್ತೆಗಳ ಮಧ್ಯೆ ಹಾಗು ಬದಿಗಳಲ್ಲಿನ ದೀಪಾಲಂಕಾರವಂತೂ ನೋಡುಗರ ಮನಸ್ಸೆಳೆಯುತ್ತದೆ. ನಗರದ ಮಧ್ಯದಲ್ಲಿ ಉಳಿಸಿಕೊಂಡಿರುವ ವಿಶಾಲವಾದ ಕೆರೆ, ಎರಡೂ ಬದಿಗಳಿಗೆ ಹೊಂದಿಕೊಂಡ ನಡಿಗೆಯ ಪಥ ಹಾಗು ಉದ್ಯಾನ ನಿಸ್ಸಂಶಯವಾಗಿ ಮನೋಲ್ಲಾಸ ನೀಡುವಲ್ಲಿ ಸಫಲವಾಗಿದೆ! ವಾರಾಂತ್ಯ ಹಾಗು ಹಬ್ಬದ ದಿನಗಳಲ್ಲಿ ಆಯೋಜಿಸುವ ಕೆರೆಯ ಮಧ್ಯದಲ್ಲಿ ನಿರ್ಮಿಸಿರುವ ಬೃಹದಾಕಾರದ ನೀರಿನ ಕಾರಂಜಿಯ ಸಂಗೀತ ಮತ್ತು ಬೆಳಕಿನ ಉಚಿತ ಪ್ರದರ್ಶನವನ್ನು ವೀಕ್ಷಿಸುವುದಂತೂ ಕಣ್ಣಿಗೆ ಹಬ್ಬ!

ಚೀನೀಯರ ಬಗ್ಗೆ ನನಗಿದ್ದ ಅನಿಸಿಕೆ ಸುಳ್ಳೆಂದು ಸಾಬೀತಾಗಿದ್ದು ಅವರೊಡನೆ ಒಡನಾಟ ಶುರುವಾದ ಮೇಲೆಯೇ. ಸಹೋದ್ಯೋಗಿಗಳೊಡನೆ ಸಲುಗೆಯಾದಾಗ ನೇರವಾಗಿ ಕೇಳಿದ್ದೆ "ನೀವು ಜಿರಲೆ ತಿನ್ನುತ್ತೀರಾ?" ಎಂದು. ಒಡನೆಯೇ ಅವರಿಗಾದ ನೋವನ್ನು ಕಂಡು ನನಗೆ ಕಸಿವಿಸಿಯಾಗಿ ಕ್ಷಮೆ ಯಾಚಿಸಿದೆ. ನಾನು ಒಡನಾಡಿದ ಚೀನಿಯರ ಬಗ್ಗೆ ಅನಿಸಿದ್ದು, ಅವರ ಮಹಾನ್ ಸ್ವಾಭಿಮಾನತೆಯ ಗುಣ, ಸಮಯಪಾಲನೆ, ಕೊಟ್ಟ ಮಾತು ನಡೆಸುವ ಪರಿ, ಮತ್ತೊಬ್ಬರ ಋಣಭಾರವನ್ನು ಎಂದೂ ತಮ್ಮ ಭುಜದ ಮೇಲೆ ಇರಿಸಿಕೊಳ್ಳದಿರುವಿಕೆ. ಇಲ್ಲಿನ ಹವಾಮಾನವಾದ ಅತೀ ಶೀತ ಹಾಗೂ ಉಷ್ಣದ ಪರಿಣಾಮದಿಂದಲೇನೋ ಸ್ವಭಾವತಃ ಕಷ್ಟಸಹಿಷ್ಣುಗಳಾದ ಇವರು ದೀರ್ಘಾಯುಷಿಗಳೂ ಹೌದು. ತಮ್ಮ ಇಳೀ ವಯಸ್ಸಿನಲ್ಲೂ ಮತ್ತೊಬ್ಬರಿಗೆ ಹೊರೆ ಆಗದೇ ತಮ್ಮನ್ನು ತಾವು ಸಂಭಾಳಿಸಿಕೊಳ್ಳುವುದಲ್ಲದೆ ನಗುಮೊಗದೆ ಮೊಮ್ಮಕ್ಕಳ ಲಾಲನೆ ಪಾಲನೆಗೆ ಸಹಾಯ ಹಸ್ತ ಚಾಚುವ ವೈಖರಿಯಂತೂ ನಿಜಕ್ಕೂ ಪ್ರಶಂಸನೀಯ. ಚೀನಿಯರು ನನ್ನಂಥ ಪರದೇಶಿಗಳನ್ನು ಆದರಿಸುವ ರೀತಿಯಂತೂ ಸ್ಮರಣೀಯ. ಭಾಷೆಯ ತೊಡಕು ಮತ್ತು ಊಟದ ಶೈಲಿ ಹೊರತು ಪಡಿಸಿದರೆ ಮಿಕ್ಕಿದ್ದೆಲ್ಲಾ ನಾನಂದುಕೊಂಡದ್ದಕ್ಕಿಂತ ವಿಭಿನ್ನವಾಗಿರುವುದಲ್ಲದೇ ಸೊಗಸಾಗಿಯೂ ಕೂಡ ಇದೆ. ಚೀನಾಕ್ಕೆ ಬಂದ ಹೊಸದರಲ್ಲಿ ಎಲ್ಲರ ಮುಖ ಚಹರೆಗಳು ಒಂದೇ ಏನೋ ಎಂಬಂತೆ ಗೋಚರಿಸುತ್ತಿದ್ದುದ್ದಲ್ಲದೇ, ಕೆಲವೊಮ್ಮೆ ಗಂಡು ಹೆಣ್ಣಿನ ನಡುವೆ ವ್ಯತ್ಯಾಸ ಗುರುತಿಸುವುದು ಕೂಡ ಕಷ್ಟವೆನಿಸುತ್ತಿತ್ತು. ಇನ್ನು ಅವರ ಹೆಸರುಗಳನ್ನಂತು ಉಚ್ಚರಿಸಲು ನಾಲಿಗೆ ಹೊರಳುವುದಿಲ್ಲ. ಸಾಮಾನ್ಯವಾಗಿ ಚೀನಿಯರ ಸಂಭಾಷಣೆ ಉಚ್ಚ ಧ್ವನಿಯಲ್ಲಿರುತ್ತೆ, ಆರಂಭದಲ್ಲಿ ಅವರುಗಳ ಸಂವಾದ ಕೇಳಿ

ಜಗಳವಾಡುತ್ತಿದ್ದಾರೇನೋ ಎನಿಸಿ ಬೇಕಾದಷ್ಟು ಸಲ ಕೆದಕಿ ಅದು ಅವರ ಸಹಜ ವಾಕ್‌ಶೈಲಿ ಎಂದು ಅರಿತುಕೊಳ್ಳುತ್ತಿದ್ದೆ. ಚೀನಿಯರು ತೈವಾನ್ ಹಾಗು ಜಪಾನೀಯರ ಬದ್ಧ ದ್ವೇಷಿಗಳು. ಕಾರ್ಖಾನೆಯಲ್ಲಿ ಕಾರ್ಮಿಕರ ಬಗ್ಗೆ ಗಮನಿಸಿದ್ದು ಅವರ ನಿಷ್ಠ ಅನುಯಾಯಿತನದ ಜೊತೆಗೆ ಹೆಚ್ಚಿನ ಪಾಳಿಯಲ್ಲಿ ದುಡಿಯುವ ಹಂಬಲ. ಪ್ರಸ್ತುತ ದುಡಿಮೆಯ ಸ್ಥಳದಲ್ಲಿ ಹೆಚ್ಚಿನ ಪಾಳಿಯಲ್ಲಿ ದುಡಿಯುವ ಅವಕಾಶವಿಲ್ಲದಿದ್ದರೆ, ಅಂತಹ ಅವಕಾಶಕ್ಕಾಗಿ ಸದಾ ಎದುರು ನೋಡುತ್ತಿದ್ದು, ಒದಗಿದ ತಕ್ಷಣ ಸ್ಥಳಾಂತರಕ್ಕೆ ಬದ್ಧರಾಗಿರುತ್ತಾರೆ. ಸ್ತ್ರೀಸಹಜ ಗುಣದಂತೆ ಇಲ್ಲಿನ ಹೆಂಗಸರೂ ತಮ್ಮ ದೇಹಸಿರಿ ಮತ್ತು ಸೌಂದರ್ಯಕ್ಕೆ ಆದ್ಯತೆ ಕೊಟ್ಟು ಮಿತವಾದ ಶಾಕಾಹಾರದ ಅಭ್ಯಾಸಕ್ಕೆ ಒತ್ತು ಕೊಡುವರು. ಇಲ್ಲಿನ ಮಣ್ಣಿನ ವಿಶೇಷ ಗುಣವಿರಬೇಕು, ಗರ್ಭ ಧರಿಸಿದ ನಂತರವೂ ಹೆಂಗಸರ ದೇಹದ ಸಪೂರತೆಗೇನೂ ಕುತ್ತು ಬರುವುದಿಲ್ಲ. ಇನ್ನು, ಗಂಡಸರು ಸಾಧಾರಣವಾಗಿ ಅಂತರ್ಮುಖಿಗಳು ಮತ್ತು ಮಿತಭಾಷಿಗಳಾದರೆ ಇದಕ್ಕೆ ತದ್ವಿರುದ್ಧವಾಗಿ ಹೆಂಗಸರು ವಾಚಾಳಿಗಳಲ್ಲದೆ ತಮ್ಮ ಆಂಗ್ಲ ಭಾಷೆಯ ಪರಿಣಿತಿಯ ಪ್ರಗತಿಗೆ ಶತ ಪ್ರಯತ್ನ ಪಡುವರು.

ಚೀನಿಯರ ಬಗ್ಗೆ ನನಗಿದ್ದ ಮಿಥ್ಯ ಅನಿಸಿಕೆಗಳಂತೆ, ಚೀನಿ ಸಹೋದ್ಯೋಗಿಗಳಿಗೆ ಭಾರತೀಯರ ಬಗ್ಗೆ ಇರುವ ಕಲ್ಪನೆಗಳಾದ ಭಾರತೀಯ ಗಂಡಸರು ಎಷ್ಟು ಸಲ ಬೇಕಾದರೂ ಮದುವೆಯಾಗಬಹುದಲ್ಲದೆ ಒಮ್ಮೆಲೆ ಅಸಂಖ್ಯ ಪತ್ನಿಯರನ್ನು ಹೊಂದಬಹುದು. ಜೀವನೋಪಾಯಕ್ಕೆ ಉದ್ಯೋಗವೇನು ಬೇಕಿಲ್ಲ, ಹಣದ ಅವಶ್ಯಕತೆಯಿದ್ದಾಗಲೆಲ್ಲಾ ಮದುವೆಯಾಗಿ ಬರುವ ವರದಕ್ಷಿಣೆಯಲ್ಲಿ ಬದುಕು ನಡೆಸಬಹುದು! ಸಸ್ಯಾಹಾರಿಗಳಾಗಿದ್ದೂ ಬದುಕುವ ಬಗೆ ಹೇಗೇ? ದೇಹಾರೋಗ್ಯ ಹಾಗು ದೇಹಬಲಕ್ಕೆ ಸಸ್ಯಾಹಾರವು ಹೇಗೆ ಸಹಾಯಕವಾಗುತ್ತದೆ? ಜೊತೆಗೆ ಸಾಮಾನ್ಯವಾಗಿ ಭಾರತೀಯರೆಲ್ಲಾ ನೃತ್ಯದಲ್ಲಿ ನಿಷ್ಣಾತರು ಎಂಬುದನ್ನು ಅಲ್ಲಗಳೆಯಲು ಬಹು ಪ್ರಯಾಸಪಡುತ್ತಿದ್ದೆ. ಅವರ ಕಲ್ಪನೆಗಳಿಗೆ ಒತ್ತು ಕೊಡುವಂತೆ ಭಾರತದಲ್ಲಿನ ಪ್ರಸ್ತುತ ವಿದ್ಯಮಾನಗಳಾದ ಮಾನಭಂಗ ಪ್ರಕರಣಗಳು, ವರದಕ್ಷಿಣೆಗಾಗಿ ಹೆಣ್ಣುಗಳನ್ನು ಹಿಂಸಿಸುವ ಇಲ್ಲ ಜೀವ ತೆಗೆಯುವ ಸುದ್ದಿಗಳನ್ನು ನಿರಂತರವಾಗಿ ಇಲ್ಲಿನ ಸುದ್ಧಿ ಮಾಧ್ಯಮಗಳಲ್ಲಿ ಬಿತ್ತರಿಸುವುದನ್ನು ಗಮನಿಸಿ ಭಾರತೀಯರೇ ಹೀಗೆ ಏನೋ ಎಂಬ ಪರೋಕ್ಷ ಭಾವನೆಯಿಂದ ನನ್ನೊಂದಿಗೆ ವಿಚಾರ ವಿನಿಮಯ ಮಾಡಿಕೊಳ್ಳುವಾಗ ಅಂಗೈ ಹುಣ್ಣಿಗೆ ಕನ್ನಡಿ ಬೇಕೇ? ಎನ್ನುವಂತೆ ಘಟನೆಯ ಭೀಕರತೆಯನ್ನು ತಿಳಿಗೊಳಿಸಲು ಯಾವುದೇ ಸೂಕ್ತ ಮಾರ್ಗ ಹೊಳೆಯದೆ ಮಾನಸಿಕವಾಗಿ ಕುಗ್ಗುವಂತಾಗಿ ವಿಷಯ ಬದಲಿಸಲು ಪ್ರಯತ್ನಿಸುತ್ತಿದ್ದೆ.

ಸ್ವಭಾವತಃ ಸ್ವಾಭಿಮಾನಿಗಳಾದ ಚೀನಿಯರು ಕಟ್ಟಾ ದೇಶಾಭಿಮಾನಿಗಳು ಕೂಡ. ಅವಕಾಶ ಸಿಕ್ಕಿದಾಗಲೆಲ್ಲಾ ತಮ್ಮ ದೇಶದ ಹಿರಿಮೆ, ಹೆಗ್ಗಳಿಕೆಗಳನ್ನು ವರ್ಣಿಸಲು ಹಿಂಜರಿಯದವರು. ಅವರ ಸಾಮಾನ್ಯ ಪರಿಜ್ಞಾನವೆಂದರೆ ಪ್ರಪಂಚದಲ್ಲಿ ತಮ್ಮ ದೇಶವೇ ಸರ್ವ ವಿಧದಲ್ಲೂ ಉಚ್ಛ್ರಾಯ ಸ್ಥಿತಿಯಲ್ಲಿದೆ ಎಂದು. ಈ ರೀತಿಯ ಮನೋಭಾವಕ್ಕೆ ಮುಖ್ಯ ಕಾರಣ ಇಲ್ಲಿನ ರಾಜಕೀಯ ವ್ಯವಸ್ಥೆ ಹಾಗು ಅವರನ್ನು ಬೆಳೆಸಿರುವ ಮತ್ತು ಬೆಳೆಸುತ್ತಿರುವ ಪರಿ. ಇಲ್ಲಿನ ಎಲ್ಲಾ ಸುದ್ದಿ ವಾಹಿನಿಗಳು, ದೂರದರ್ಶನ ಮತ್ತು ದಿನಪತ್ರಿಕೆಗಳೆಲ್ಲಾ ಸರ್ಕಾರದ ಹಿಡಿತದಲ್ಲಿದ್ದು ಮಿಸುಕಾಡುವುದಕ್ಕೆ ಯಾರಿಗೂ ಅವಕಾಶವಿಲ್ಲ. ದೇಶದೊಳಗಿನ ಯಾವುದೇ ಋಣಾತ್ಮಕ ವಿಚಾರ, ವಾರ್ತೆ ಅತಿ ಕ್ಷಿಪ್ರ ಗತಿಯಲ್ಲಿ ತೇಲಿಸಿ ಮರೆ ಮಾಚುತ್ತಾರೆ. ಎಲ್ಲೆಲ್ಲೂ ತಮ್ಮ ದೇಶದ ಬಗ್ಗೆ ಬಹುಪರಾಕ್ ಹಾಗು ಪರದೇಶಗಳ ಬಗ್ಗೆ ನಿಂದನೆಗಳ ಸುರಿಮಳೆ. ಒಂದು ರೀತಿ ಅದೂ ಸರಿಯೆ, ಇಲ್ಲದಿದ್ದರೆ, ತಮ್ಮ ದೇಶದ ಬಗ್ಗೆ ಪ್ರಜೆಗಳಿಗೆ ಕೀಳರಿಮೆಯ ಅರಿವು ಮೂಡಿ ರೊಚ್ಚಿಗೆದ್ದ ಜನರನ್ನು ಹತೋಟಿಗೆ ತರುವ ಬಗೆಯಾದರೂ ಹೇಗೇ? ಹಾಗಾಗಿ ಇಲ್ಲಿನ ಸರ್ಕಾರವು ಅವರನ್ನು ಭ್ರಮಾಲೋಕದಲ್ಲಿ ತೇಲಿಬಿಟ್ಟಿದೆ. ಯಾವತ್ತು ಜನಗಳಿಗೆ ತಾವು ಭ್ರಮೆಯಲ್ಲಿದ್ದೇವೆ ಎಂಬ ಅರಿವು ಮೂಡುವುದೋ ಆಗ ಆಗುವ ಅನಾಹುತಕ್ಕೆ ಎಣೆಯೇ ಇಲ್ಲದಂತಾಗುವುದು! ಸರ್ಕಾರ ತನ್ನ ಪ್ರಜೆಗಳಿಗೆ ಸಕಲ ಸವಲತ್ತುಗಳನ್ನು ಒದಗಿಸಿದಂತೆ ತೋರ್ಪಡಿಸಲು ಸಾಕಷ್ಟು ಯೋಜನೆಗಳನ್ನು ಹಮ್ಮಿಕೊಂಡಿದ್ದು ಅನುಷ್ಠಾನಕ್ಕೂ ಮುಂದಾಗಿದೆ. ಬೃಹತ್ ಕಟ್ಟಡಗಳ ನಿರ್ಮಾಣ, ಕೈಗಾರಿಕಾ ವಲಯಗಳ ಅಭಿವೃದ್ಧಿ, ಕೃಷಿಕರ ಪೋಷಣೆ, ರೈಲು ಮಾರ್ಗಗಳ ಆಧುನೀಕರಣ, ಸೇತುವೆಗಳ ಕೆಡವುವಿಕೆ ಹಾಗು ಪುನರ್ ನಿರ್ಮಾಣ, ರಸ್ತೆಗಳ ಪುನಃರುಜ್ಜೀವನ, ಮೇಲ್ಸೇತುವೆ ಸಂಚಾರ ನಿರ್ಮಾಣ, ಮೆಟ್ರೊ ಮಾರ್ಗಗಳ ನಿರ್ಮಾಣ ಮುಂತಾದವುಗಳನ್ನು ಇಡೀ ದೇಶದ ಉದ್ದಗಲಕ್ಕೂ ಅಭಿವೃದ್ಧಿ ಎನ್ನುವ ಜಾಲದೊಂದಿಗೆ ವಿಶಾಲವಾಗಿ ಹರಡಿ ನಂಬಿಸಿದೆ! ಸಂಬಳ ಪಡೆಯುವ ನೌಕರರೆಲ್ಲಾ ತಮ್ಮ ಆದಾಯದ ಶೇಖಡ ನಲವತ್ತರಷ್ಟನ್ನು ಪ್ರತ್ಯಕ್ಷ ಹಾಗು ಪರೋಕ್ಷ ತೆರಿಗೆ ರೂಪದಲ್ಲಿ ಸರ್ಕಾರಕ್ಕೆ ಯಾವುದೇ ವಿನಾಯಿತಿಯಿಲ್ಲದೆ ಪಾವತಿಸಬೇಕಾಗಿದೆ. ಮಿಥ್ಯ ಎಂದಿದ್ದರೂ ಮಿಥ್ಯವೇ, ಕ್ಷಣಿಕಕ್ಕೆ ಸತ್ಯವೆಂದು ಗೋಚರಿಸಿದರೂ ಹತ್ತಿರದಲ್ಲೇ ಕ್ರಾಂತಿಯಾಗುವ ಸಂಭವಕ್ಕೆ ನೆಪ ಎನ್ನುವಂತೆ ದೇಶದೆಲ್ಲೆಡೆ ಅಲ್ಲಲ್ಲಿ ನಡೆಯುತ್ತಿರುವ ಮುಷ್ಕರ, ಮಾನವ ಬಾಂಬ್, ಕಟ್ಟಡ ಹಾಗು ಬಸ್, ರೈಲಿನಲ್ಲಿ ಕಂಡು ಬರುವ ಬೆಂಕಿ ಅವಘಡಗಳಂಥಹ ಚಟುವಟಿಕೆಗಳು ಸಾಕ್ಷಿಯಂತಿವೆ.

ಇತ್ತ ಬೆಳವಾಡಿ ಮನೆಯಲ್ಲಿ, ಎರಡನೆಯ ತಂಗಿ ನೇತ್ರಾವತಿಯ ವಿವಾಹ ನಾಗಭೂಷಣ್ ಎಂಬುವರೊಡನೆ ವಿಜೃಂಭಣೆಯಿಂದ ನೆರವೇರಿದ ಸಮಾರಂಭದಲ್ಲಿ ಭಾಗವಹಿಸಿ ಅಕ್ಷತೆ ಕಾಳಿನೊಂದಿಗೆ ವಧೂ ವರರನ್ನು ಸಂತೋಷದಿಂದ ಆಶೀರ್ವದಿಸಿ ಶುಭ ಕೋರಿದ್ದೆ.

ಚೀನಿಯರ ಜೀವನ ಶೈಲಿ ಎರಡು ತಲೆಮಾರಿಗೇ ಪಾಶ್ಚಾತ್ಯ ಸಂಸ್ಕೃತಿಯ ಮೋಹಕ್ಕೆ ಮಾರುಹೋಗಿ ತಮ್ಮ ಅಮೂಲ್ಯವಾದ ಐದು ಸಾವಿರ ವರ್ಷಗಳಿಗೂ ಮಿಗಿಲಾದ ಹಿಂದಿನಿಂದ ಪಾಲಿಸಿಕೊಂಡು ಬಂದ ವೈವಿಧ್ಯಮಯವಾದ ಸ್ವಂತ ಶ್ರೀಮಂತ ಸಂಸ್ಕೃತಿಯನ್ನು ಕಡೆಗಣಿಸಿ ಬದಲಾಗಿದ್ದಾರೆ. ಪ್ರಸ್ತುತ ದೇಶದ ಉದ್ದಗಲಕ್ಕೂ ಎಲ್ಲಿ ನೋಡಿದರೂ ಕೈಗೂಸಿನಿಂದ ಹಿಡಿದು ಹಣ್ಣು ಹಣ್ಣು ಮುದುಕರವರೆಗೆ ಏಕತಾನತೆಯ ಜೀನ್ಸ್ ಪ್ಯಾಂಟ್ ಜೊತೆಗೆ ಟೀ ಷರ್ಟ್ ತೊಟ್ಟ ದೃಶ್ಯ! ಈಗಿನ ಯುವ ಜನಾಂಗಕ್ಕೆ ಒಂದು ತಲೆಮಾರಿನ ಹಿಂದಿನವರ ಜೀವನ ಸ್ಥಿತಿಯ ಬಗ್ಗೆ ಏನೇನೂ ಮಾಹಿತಿ ಇಲ್ಲಾ! ಆಗೆಲ್ಲಾ ಒಪ್ಪೊತ್ತಿನ ಕೂಳಿಗೂ ಪರದಾಡುತ್ತಿದ್ದರೆಂದರೆ ಅವರಿಗೆ ಅರ್ಥವಾಗುವುದಿಲ್ಲ. ಯುವಕರು ಹಾಗೂ ಮಧ್ಯ ವಯಸ್ಕರು ತಮ್ಮ ಸ್ವಂತ ಹಳ್ಳಿ, ಊರಿನೊಡನೆ ಹಿರಿಯರನ್ನೂ ತ್ಯಜಿಸಿ ದೇಶದುದ್ದಗಲಕ್ಕೆ ಹರಡಿರುವ ನಗರ ಪ್ರದೇಶಗಳಲ್ಲಿ ಕಳೆದು ಹೋಗಿರುವರು. ಕಾರ್ಮಿಕ ವರ್ಗದವರಂತೂ, ಕತ್ತೆಗಳ ಹಾಗೆ ದಿನಕ್ಕೆ ಹನ್ನೆರಡರಿಂದ ಹದಿನಾರು ಘಂಟೆ ದುಡಿದು ಅಷ್ಟಿಷ್ಟು ಹಣ ಉಳಿಸಲು ಹರಸಾಹಸ ಮಾಡಿ ಸ್ವಂತ ಅಪಾರ್ಟ್ಮೆಂಟ್, ಕಾರು ಹೊಂದುವ ಕನಸಿನಲ್ಲಿರುತ್ತಾರೆ. ಕನಸೆಲ್ಲಾ ಸಾಕಾರವಾಗುವಷ್ಟು ಸುಲಭವಲ್ಲವಲ್ಲಾ ಜೀವನ ಮಟ್ಟದ ಅಭಿವೃದ್ಧಿ! ತಮ್ಮವರಿಂದ ದೂರದಲ್ಲಿರುವ ಮುಕ್ಕಾಲಂಶ ಯುವ ಪೀಳಿಗೆ ಲಂಗು ಲಗಾಮಿಲ್ಲದೆ ಸ್ವೇಚ್ಛಾ ಜೀವನದ ಪಾಶಕ್ಕೆ ಸಿಲುಕಿ ವಾರದ ಐದು ದಿನಗಳು ಅಂತರ್ಜಾಲ, ಪ್ರಯಾಣ ಮತ್ತು ಕರ್ತವ್ಯದಲ್ಲಿ ಮುಳುಗಿ, ವಾರಾಂತ್ಯವಿಡೀ ಪಬ್, ಬಾರ್, ಪಾರ್ಟಿ, ಜೂಜಾಟ ಸಹಿತ ವರ್ಣರಂಜಿತ ರಾತ್ರಿಗಳಲ್ಲಿ ತೊಡಗಿಸಿಕೊಂಡು ತಮ್ಮ ತನು, ಮನ ಹಾಗೂ ಧನದ ಅಪವ್ಯಯದಿಂದ ಸರ್ವಸ್ವವನ್ನು ಕಳೆದುಕೊಳ್ಳುತ್ತಿರುವ ನಿದರ್ಶನ ಹೇರಳವಾಗಿದೆ. ಸ್ವೇಚ್ಛಾ ಪ್ರವೃತ್ತಿಯ ಫಲಿತಾಂಶವಾದ ಬೇಡದ ಗರ್ಭ, ಮಕ್ಕಳು ಅದನ್ನು ಭರಿಸಲಾಗದೆ ಜಗಳ, ವಿರಸ, ದೂರವಾಗುವಿಕೆ ಹಾಗು ವಿಚ್ಛೇದನಗಳ ಸಂಖ್ಯೆ ಏರಿ, ಕಟ್ಟಕಡೆಗೆ ಕೈಗೆಟುಕದ ದ್ರಾಕ್ಷಿ ಹುಳಿ ಎಂಬಂತೆ ಬಿಸಿರಕ್ತದ ಆರ್ಭಟ ತಣ್ಣಗಾಗುವ ಹೊತ್ತಿಗೆ ಒಂಟಿ ಜೀವನಕ್ಕೆ ತಮ್ಮನ್ನು ಒಗ್ಗಿಸಿಕೊಂಡು ಅಂತರ್ಮುಖಿಗಳಾಗುತ್ತಿದ್ದಾರೆ. ಅದಕ್ಕೆ ಪುಷ್ಠಿ ನೀಡುವಂತೆ ಸ್ಮಾರ್ಟ್ ಫೋನ್, ಟ್ಯಾಬ್ಲೆಟ್‌ಗಳು ತಮ್ಮ ಪ್ರಭಾವವನ್ನು ಮಿತಿ ಮೀರಿ ಇವರುಗಳ ಮೇಲೆ ಬೀರಿದೆ. ಸಾಮಾನ್ಯವಾಗಿ ಎಲ್ಲೆಡೆ ಹಿರಿಯರನ್ನು ಹೊರತು

ಪಡಿಸಿ, ಮಕ್ಕಳಿಂದ ಮಧ್ಯವಯಸ್ಕರವರೆಗೆ ಸ್ಮಾರ್ಟ್ ಫೋನ್, ಟ್ಯಾಬ್ಲೆಟ್‌ಗಳೊಂದಿಗೆ ಮುಳುಗಿ ತೇಲುತ್ತಿರುವ ದೃಶ್ಯ ಕಾಣಸಿಗುತ್ತದೆ. ಗಂಡ, ಹೆಂಡತಿ ಮತ್ತು ಮಗು ನಿಂತಿರಲಿ, ಕುಳಿತಿರಲಿ, ಪ್ರಯಾಣದಲ್ಲಿರಲಿ, ಪ್ರೇಕ್ಷಣೀಯ ಸ್ಥಳವಿರಲಿ ಕಡೆಗೆ ಶೌಚಾಲಯವಿರಲಿ, ನಾವೆಲ್ಲಿದ್ದೇವೆ ಎಂಬ ಪರಿವೆ ಇಲ್ಲದೆ ಈ ವಿದ್ಯುನ್ಮಾನ ಉಪಕರಣಗಳಿಗೆ ಶರಣಾಗಿದ್ದಾರೆ. ಹಳ್ಳಿಗಳಲ್ಲಿ ಉಳಿದ ಹಿರಿಯರು ಇದಕ್ಕೆ ತದ್ವಿರುದ್ಧವಾಗಿ ಇನ್ನೂ ಅಲ್ಪ ಸ್ವಲ್ಪ ಹಳೆಯ ಸಂಸ್ಕೃತಿಯನ್ನು ಉಳಿಸಿಕೊಂಡಿದ್ದರೆ, ಕಾರಣಾಂತರದಿಂದ ಅಲ್ಲೆ ನೆಲೆಸಿರುವ ಅತೀ ವಿರಳವಾದ ಯುವ ಪೀಳಿಗೆ ಹಳೆಯದನ್ನು ಬಿಡಲಾಗದೆ ಹೊಸದನ್ನು ಪಡೆಯಲಾಗದೆ ಬಾಯ್ ಫ್ರೆಂಡ್ ಗರ್ಲ್ ಫ್ರೆಂಡ್ ಸಂಸ್ಕೃತಿಗೆ ಬೀಳದೆ ಒಳ್ಳೆಯ ಜೀವನಕ್ಕೆ ನಾಂದಿ ಹಾಡಲೆಂದು ದೇವರು ದಿಂಡರನ್ನು ಮೊರೆ ಹೋಗುವುದೂ ಇದೆ!

ಸೂಜೌ ನಗರದ ಕಾರ್ಖಾನೆಯಲ್ಲಿ ನನ್ನ ಉದ್ಯೋಗ ಪರ್ವಕ್ಕೆ ಆರು ತಿಂಗಳಾಗುತ್ತಾ ಬಂದಿತ್ತು. ಕಾರ್ಖಾನೆಯಾದ್ಯಂತ ಮೂವರಿಗೆ ಮಾತ್ರ ಆಂಗ್ಲ ಭಾಷೆ ಅರೆಬರೆ ಅರ್ಥವಾಗುತ್ತಿತ್ತು. ನನ್ನ ಸಹಾಯಕಿ ಶೇಕಡ ಐವತ್ತರಷ್ಟನ್ನೇ ತರ್ಜುಮೆ ಮಾಡಲರ್ಹಳಾಗಿದ್ದಳು, ಹಾಗಾಗಿ ಮಿಕ್ಕವರೊಡನೆ ಸಂಭಾಷಿಸಲು ಬಹಳ ಪ್ರಯಾಸಪಡಬೇಕಾಗಿತ್ತಿತ್ತು. ನನ್ನ ಮಾತಿನ ವೇಗ, ಉಚ್ಚಾರಣೆ ಅವರಿಗಂತು ಕಬ್ಬಿಣದ ಕಡಲೆಯಾಗಿ ಜೀರ್ಣಿಸಿಕೊಳ್ಳಲಾಗದೆ ಇದ್ದುದ್ದನ್ನು ಗಮನಿಸಿ, ನಿಧಾನ ಗತಿಯಲ್ಲಿ ಉಚ್ಚರಿಸಲು ಪ್ರಯತ್ನ ಪಡುತ್ತಿದ್ದೆ. ಆದರೂ ಎಡವುತ್ತಿದ್ದೆ. ಕಡೆಗೆ ಹಾಳೆಯಲ್ಲಿ ಬರೆದು ಸಂಭಾಷಿಸಲು(?) ಆರಂಭಿಸಿದ ಮೇಲೆ ಕ್ರಮೇಣ ಫಲಿತಾಂಶ ವೃದ್ಧಿಸತೊಡಗಿತು.

ಸುಮಾರು ಹತ್ತು ವರ್ಷಗಳ ಹಿಂದೆ, ಕಿರ್ಲೋಸ್ಕರ್ ಕಾರ್ಖಾನೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ಒಂದು ಪ್ರಾಜೆಕ್ಟ್‌ಗೋಸ್ಕರ ಪ್ಲಾಸ್ಟಿಕ್ ವಸ್ತುಗಳನ್ನು ಅಭಿವೃದ್ಧಿಪಡಿಸಿ ಖರೀದಿಸುವ ಜವಾಬ್ದಾರಿ ಇದ್ದಾಗ, ಅಂದಿನ ಖರೀದಿ ವಿಭಾಗದ ಮುಖ್ಯಸ್ಥರಾಗಿದ್ದ ಶ್ರೀಯುತ ರವಿ ಹರ್ವಾಲ್ಕರ್‌ರವರ ಶಿಫಾರಸ್ಸಿನ ಮೇರೆಗೆ ಮೇಟಗಳ್ಳಿಯಲ್ಲಿರುವ ಕೇಂದ್ರೀಯ ಪ್ಲಾಸ್ಟಿಕ್ಸ್ ತಂತ್ರಜ್ಞಾನ ಸಂಸ್ಥೆಯಲ್ಲಿ ಒಂದು ವಾರದ ಅವಧಿಯ ಪ್ಲಾಸ್ಟಿಕ್ ಉತ್ಪನ್ನಗಳ ಉತ್ಪಾದನೆ ಹಾಗೂ ಗುಣಮಟ್ಟ ಪರಿಶೀಲನೆಯ ಬಗ್ಗೆ ತರಬೇತಿಯಾಗಿತ್ತು. ಅಂದು ಕಲಿತಿದ್ದ ವಿಷಯ ಇಂದು ಉಪಯೋಗಕ್ಕೆ ಬಂದು ಕಲಿತ ವಿಷಯಗಳು ಎಂದೂ ಅನುಪಯುಕ್ತವಲ್ಲ, ಎಂದಾದರೂ ಸಹಾಯಕ್ಕೆ ಬರುತ್ತದೆ ಎನ್ನುವ ಹಿರಿಯರ ನುಡಿಮುತ್ತು ನನ್ನ ಉದ್ಯೋಗದ ಹಾದಿಯಲ್ಲಿ ದೊರಕಿ ಸತ್ಯದ ಸಾಕಾರವಾಗಿತ್ತು! ನನ್ನ ವತಿಯಿಂದಾದ ಅಳಿಲು ಸೇವೆ ಹಾಗು ಸಹೋದ್ಯೋಗಿಗಳ ಪರಿಶ್ರಮವು ಕಾರ್ಖಾನೆಯ ಅಭಿವೃದ್ಧಿಗೆ

ಸಹಾಯಕವಾಗಿ ತೃಪ್ತರಾದ ಮಾಲೀಕರು ಪ್ರಾಜೆಕ್ಟ್ ಮ್ಯಾನೇಜರ್ ಹುದ್ದೆಯನ್ನಲಂಕರಿಸಿದ್ದ ನನ್ನನ್ನು ಕಾರ್ಖಾನೆಯ ನಿರ್ದೇಶಕನ ಹುದ್ದೆಗೆ ಬಡ್ತಿ ಕೊಟ್ಟರು. ನನಗೋ ವಿಷಯ ಅರಿತ ಕೂಡಲೇ ಭಯವಾಯಿತು, ಅಷ್ಟೊಂದು ದೊಡ್ಡ ಜವಾಬ್ದಾರಿಯನ್ನು ಹೊತ್ತು ಹೇಗೆ ನಿಭಾಯಿಸುವುದೆಂದು. ಎಲ್ಲೋ ಕೇಳಿದ ಮಾತು ನೆನಪಾಯಿತು– ಜವಾಬ್ದಾರಿಯೆಂಬ ಹೊರೆಯ ಫಲಿತಾಂಶ ಧನಾತ್ಮಕವಾದರೆ ಅದು ನಿನ್ನ ಪರಿಶ್ರಮದಿಂದ, ಋಣಾತ್ಮಕವಾದರೆ ಹೊರೆಯನ್ನು ಹೊರಿಸಿದವರ ತಪ್ಪು ನಿರ್ಧಾರದಿಂದ . ನಿರ್ದೇಶಕನ ಸ್ಥಾನವನ್ನಲಂಕರಿಸಿದ ಮೇಲೆ ಪ್ರಥಮ ಬಾರಿಗೆ ಕಾರ್ಖಾನೆಯಲ್ಲಿನ ನೂರಾ ಅರವತ್ತೆರಡು ಸಹೋದ್ಯೋಗಿಗಳೆದುರು ಭಾಷಣ ಮಾಡಲು ನಿಂತಾಗ ಶ್ರೀ ಪಾಂಡುರಂಗ ಪವರ್ ಪ್ರೆಸ್‌ನಲ್ಲಿನ ಸಹಾಯಕ, ಲಕ್ಷ್ಮೀ ಭಂಡಾರದಲ್ಲಿನ ಪೊಟ್ಟಣ ಕಟ್ಟುವ ಹುಡುಗ, ಚಂಪಕ ಅಗರಬತ್ತಿ ಕಾರ್ಖಾನೆಯಲ್ಲಿ ಗಂಧದ ಕಡ್ಡಿಗಳನ್ನು ಪ್ಯಾಕಿಂಗ್ ಮಾಡುತ್ತಿದ್ದವ ಹಾಗೂ ಚಾಮುಂಡಿ ಮೈನಿಂಗ್ ಅಂಡ್ ಮಿನರಲ್ ಇಂಡಸ್ಟ್ರಿಯಲ್ಲಿ ಮೂಟೆ ಹೊತ್ತು ಕಾಫಿ, ಟೀ ಸರಬರಾಜು ಮಾಡುತ್ತಿದ್ದ ಹುಡುಗನ ನೆನಪಾಗಿ ಹೆಮ್ಮೆಯೆನಿಸಿತು! ಹಾಗೆಯೆ ಕಿರ್ಲೋಸ್ಕರ್‌ನಲ್ಲಿನ ಮೊದಲನೆ ದಿನ ನಾಗರಾಜ ಎಂಬಾತ ಹೇಳಿದ್ದ ಮಾತುಗಳು ಮುಂದೆಂದಾದರೂ ನೀವು ಕಾರ್ಖಾನೆಯ ಜನರಲ್ ಮ್ಯಾನೇಜರ್ ಆದರೆ ನೆನಪಾದವು! ಮುಂದೆ ಭಾರತಕ್ಕೆ ಭೇಟಿಯಿತ್ತಾಗ ನಾಗರಾಜನನ್ನು ಸಂಧಿಸಿ, ನಿನ್ನ ಬಾಯ ಹಾರೈಕೆಯಂತೆ ಇಂದು ನಾನೂ ಒಂದು ಕಾರ್ಖಾನೆಯ ಅತ್ಯುನ್ನತ ಪದವಿಯಲ್ಲಿದ್ದೇನೆ ಎಂದು ತಿಳಿಸಿ ಸಿಹಿ ಹಂಚಿಕೊಳ್ಳಬೇಕೆಂದು ಪಟ್ಟ ಪ್ರಯತ್ನ ಇನ್ನೂ ಕೈಗೂಡಿಲ್ಲ.

ಅಂದ ಹಾಗೇ ಮಾಲೀಕರು ತಪ್ಪು ನಿರ್ಧಾರ ತೆಗೆದುಕೊಂಡಿರಲಿಲ್ಲ, ಕಾರ್ಖಾನೆಯ ಪ್ರಗತಿಯ ಗೆರೆ ವರ್ಷದಿಂದ ವರ್ಷಕ್ಕೆ ಏರುತ್ತಲೇ ಹೋಯಿತು. ಎಲ್ಲಾ ವಿಭಾಗಗಳ ಸಾಧಕ ಬಾಧಕಗಳನ್ನು ಅರಿತು ಹತೋಟಿಗೆ ತರಲು ಸರಿ ಸುಮಾರು ಇನ್ನಾರು ತಿಂಗಳು ಹಿಡಿದು ಮುಂದಿನದೆಲ್ಲಾ ಇತಿಹಾಸವಾಯಿತು. ನನ್ನ ಕಾರ್ಯಕ್ಷಮತೆಯ ಬಗ್ಗೆ ಹೆಮ್ಮೆ ಇತ್ತು, ಗೌರವ ಸ್ಥಾನ ದೊರಕಿತ್ತು, ಆ ಸ್ಥಾನದ ಘನತೆ ಉಳಿಸಿ ಬೆಳೆಸಿಕೊಂಡು ಹೋಗುವ ವಿಚಾರ ಮಾತ್ರ ಬಲು ಕಠಿಣ ಸಾಧ್ಯವಾಗಿತ್ತು. ಆ ನಿಟ್ಟಿನಲ್ಲಿ ಜೋಪಾನವಾಗಿ ನಿಭಾಯಿಸುವುದನ್ನು ಕರತಲಾಮಲಕ ಮಾಡಿಕೊಳ್ಳುವ ಪ್ರಯತ್ನವಂತೂ ಯಾವುದೇ ಅನುಮಾನವಿಲ್ಲದಂತೆ ನಡೆದಿತ್ತು. ಮಾಲೀಕರ ಹಾಗು ನನ್ನ ನಡುವೆ ಹುದ್ದೆಯ ಜವಾಬ್ದಾರಿಗನುಗುಣವಾಗಿ ನನ್ನ ಇತಿ ಮಿತಿಗಳನ್ನು ನಿರ್ಧರಿಸಿ ಒಪ್ಪಂದಕ್ಕೆ ಬಂದಿದ್ದೆವು. ಇತಿ ಮಿತಿಗಳ ಮೀರಿ ನಿರ್ಧಾರ ಕೈಗೊಳ್ಳುವ ಸಂದರ್ಭದಲ್ಲಿ ಮಾತ್ರ ಅವರನ್ನು ಸಂಪರ್ಕಿಸಬೇಕಿತ್ತು, ಹಾಗಾಗಿ ನನ್ನ ಕೆಲಸದಲ್ಲಿ ಸಂಪೂರ್ಣ ಸ್ವಾತಂತ್ರ್ಯವಿದ್ದುದ್ದರಿಂದ ಗೋಡಾ ಹೈ ಔರ್

ಮೈದಾನ್ ಹೈ ಎಂಬಂತೆ ನನಗೆ ಸರಿ ತೋಚಿದ ರೀತಿಯಲ್ಲಿ ಕಾರ್ಖಾನೆಯ ಪ್ರಗತಿಗೆ ಪ್ರಯತ್ನಗಳನ್ನು ನಡೆಸುವುದಕ್ಕಿದ್ದ ವಿಪುಲ ಅವಕಾಶಗಳನ್ನು ಉಪಯೋಗಿಸಿಕೊಂಡು ಮುಂದುವರೆಯುತ್ತಿದ್ದೆ. ಕೆಲವೊಮ್ಮೆ ನನಗೇ ಆತಂಕವೆನಿಸುತ್ತಿತ್ತು, ನಾನು ತೆಗೆದುಕೊಳ್ಳುವ ನಿರ್ಧಾರ ಸರಿಯೋ ತಪ್ಪೋ? ಫಲಿತಾಂಶ ನಿರೀಕ್ಷಿತ ಮಟ್ಟ ತಲುಪುವುದೋ ಇಲ್ಲವೋ ಎನ್ನುವ ಅನುಮಾನ ಕಾಡುತ್ತಿರುತ್ತಿತ್ತು. ಆಗೆಲ್ಲಾ, ನಿರ್ಧಾರಕ್ಕೆ ಮೊದಲು ನನ್ನನ್ನು ನಾನೇ ನನಗೆ ತಿಳಿದ ಮಟ್ಟಿಗೆ ಸಾಧ್ಯವಾದಷ್ಟು ಪ್ರಶ್ನೆಗಳನ್ನು ಹಾಕಿಕೊಂಡು ಸಾಧಕ ಬಾಧಕಗಳನ್ನು ಅವಲೋಕಿಸಿ ಮುಂದಿನ ಹೆಜ್ಜೆ ಇಡುತ್ತಿದ್ದೆ. ಮಾಲೀಕರು ಯಾವತ್ತೂ ನಾನು ತೆಗೆದುಕೊಂಡ ನಿರ್ಧಾರಕ್ಕೆ ಅಡ್ಡ ಬರುತ್ತಿರಲಿಲ್ಲ! ಇಲ್ಲಿಯವರೆಗೂ, ಮೇಲಿನಧಿಕಾರಿಗಳ ಪ್ರಶ್ನಾವಳಿಗೆ ಉತ್ತರಿಸಲಷ್ಟೇ ಒಗ್ಗಿಕೊಂಡಿದ್ದ ಅನುಭವವು ಈಗ ಬೇರೆಯದೇ ಆಯಾಮಕ್ಕೆ ಒಗ್ಗಲು ಸ್ವಲ್ಪ ಸಮಯ ಹಿಡಿಯಿತು. ಈ ಭರಾಟೆಯಲ್ಲಿ ಮೂರು ವರ್ಷಗಳು ಮಿಂಚಂತೆ ಕಣ್ಮರೆಯಾಗಿತ್ತು.

ಚೀನಾದಲ್ಲಿನ ಸೂಜೌ ನಗರದಲ್ಲಿ ವಾಸ ಮಾಡಲು ಆರಂಭಿಸಿದ ವರ್ಷದಲ್ಲಿ ಚಳಿಗಾಲ ಆರಂಭವಾಗುತ್ತಿದ್ದ ಹಾಗೇ ಇಲ್ಲಿನ ಜನರ ಉಡುಗೆ ತೊಡುಗೆಗಳಲ್ಲಿ ಸಂಪೂರ್ಣ ಬದಲಾವಣೆಯಾಗಿತ್ತು. ಸಹೋದ್ಯೋಗಿಗಳು ನನಗೂ ಉಡುಪಿನಲ್ಲಿ ಬದಲಾವಣೆ ಮಾಡಿಕೊಳ್ಳಲು ಪದೇ ಪದೇ ಜ್ಞಾಪಿಸುತ್ತಲೇ ಇದ್ದರೂ, ಭಾರತದಲ್ಲಿದ್ದಾಗಲಿನ ಚಳಿಗಾಲದ ಹವಾಮಾನವನ್ನು ಪರಿಗಣಿಸಿ ಅವರಿಗೆ ಗೇಲಿ ಮಾಡುತ್ತಿದ್ದೆ! ಈ ಚಳಿಗೆಲ್ಲಾ ಹೆದರಿದರೆ ಹೇಗೇ? ಎಂದು. ಅವರೂ ಹೇಳುವಷ್ಟು ಹೇಳಿ ಸುಮ್ಮನಾದರು. ಕ್ರಮೇಣ ಅಲ್ಲಿನ ಚಳಿಯ ತೀವ್ರತೆ ಹೆಚ್ಚಿ ತಡೆದುಕೊಳ್ಳಲಾಗದ ಹಂತಕ್ಕೆ ಬರುವಷ್ಟರಲ್ಲಿ ಕಾಲ ಮಿಂಚಿತ್ತು!

ನನ್ನ ಅದೃಷ್ಟವೋ ಅಥವಾ ದುರದೃಷ್ಟವೋ ಎಂಬಂತೆ ಹತ್ತು ವರ್ಷಗಳ ತರುವಾಯ ಸದರಿ ವರ್ಷದಲ್ಲಿ ಸರಾಸರಿ ಎರಡು ಅಡಿ ಎತ್ತರದ ಹಿಮಪಾತ ಬೇರೆ ಮರುಕಳಿಸಿತ್ತು ಆ ವಲಯದಲ್ಲಿ. ಚಿತ್ರಪಟಗಳಲ್ಲಿ ಹಾಗೂ ಚಲನಚಿತ್ರಗಳಲ್ಲಷ್ಟೆ ನೋಡಿ ಗೊತ್ತಿದ್ದ ಹಿಮವನ್ನು ಈಗ ಪ್ರತ್ಯಕ್ಷ ಕಂಡು ಅನುಭವಿಸುವಂತಾದರೂ ಮರಣಯಾತನೆಯು ನನ್ನ ಪಾಲಾಗಿತ್ತು! ಮಾಡಿದ್ದುಣ್ಣೋ ಮಹರಾಯ ಎಂಬಂತೆ ಕೈ ಬೆರಳುಗಳೆಲ್ಲಾ ನೀಲಿಗಟ್ಟಿ ಊದಿಕೊಂಡಿತ್ತಲ್ಲದೇ ಪಾದಗಳಲ್ಲಿ ವ್ರಣಗಳಾಗಿ ಒಡೆದು ರಕ್ತ ಒಸರಿ ಹೆಜ್ಜೆಯಿಡಲು ಪ್ರಯಾಸ ಪಡುವಂತಾಯಿತು. ಎಲ್ಲೆಲ್ಲೂ ಹಿಮವು ತನ್ನ ಬಿಳಿಯ ಸೆರಗನ್ನು ಹಾಸಿ ಕಣ್ಣಿಗೆ ಮುದ ನೀಡುತ್ತಿದ್ದರೂ ಕೊರೆಯುವ ಚಳಿಯಿಂದಾಗಿ ನಖಶಿಖಾಂತ ಆಗುತ್ತಿದ್ದ ಯಮಯಾತನೆ ಮಾತ್ರ ರುದ್ರ

ರಮಣೀಯತೆ  ಎಂದರೇನು? ಎಂಬುದನ್ನು ಚಳಿಗಾಲ ಮುಗಿಯುವವರೆಗೂ ನಿರಂತರವಾಗಿ ನೆನಪಿಸುತ್ತಲೇ ಇತ್ತು.

ಬಹು ದೀರ್ಘಾವಧಿಯ ತರುವಾಯ ಆ ವಲಯದಲ್ಲಾದ ಹಿಮಪಾತ ತನ್ನ ಪ್ರತಾಪವನ್ನು ನಾನು ಸೇವೆ ಸಲ್ಲಿಸುತ್ತಿದ್ದ ಕಾರ್ಖಾನೆಯ ನಾಲ್ಕುಸಾವಿರದ ಐನೂರು ಚದರ ಮೀಟರ್ ವಿಸ್ತಾರದ ಉಗ್ರಾಣಕ್ಕೆ ಹೊದಿಸಿದ್ದ ಚಾವಣಿಯ ಮೇಲಿನ ಎರಡಡಿ ದಪ್ಪದ ಮಂಜಿನ ರೂಪದಲ್ಲಿ ತೋರಿಸಿ, ಚಾವಣಿಯು ಆ ಭಾರವನ್ನು ಹೊರಲು ಶಕ್ತವಾಗದೆ ಸಾರಾಸಗಟಾಗಿ ಕುಸಿದು ಉಗ್ರಾಣದಲ್ಲಿ ಶೇಖರಿಸಿದ್ದ ಉತ್ಪಾದನೆಗಳನ್ನೆಲ್ಲಾ ನಾಶ ಮಾಡಿತ್ತು. ದುರಂತವನ್ನು ವೀಕ್ಷಿಸಿದ ಕೆಲವರು ನುಡಿದ ಕಿವಿಮಾತು  ಚಾವಣಿಯ ಮೇಲೆ ಮಂಜು ಶೇಖರಗೊಳ್ಳುತ್ತಿದ್ದ ಹಾಗೇ ಉಪ್ಪನ್ನು ಹರಡಿದ್ದಿದ್ದರೆ ಮಂಜೆಲ್ಲಾ ಕರಗಿ ನೀರಾಗುತ್ತಿದ್ದುದ್ದರಿಂದ ಆಗಿದ್ದ ಅನಾಹುತವನ್ನು ತಪ್ಪಿಸಬಹುದಿತ್ತು ಎಂದು.



# ಅಧ್ಯಾಯ ೯

## ಅಂತರಂಗದ ತುಮುಲ

ಕಾರ್ಖಾನೆಯಲ್ಲಿ ಕರ್ತವ್ಯ ನಿರ್ವಹಿಸಿದ ತರುವಾಯ, ಮನೆಯಲ್ಲಿ ಪ್ರತಿದಿನ ಸಂಜೆಯ ವೇಳೆಯ ಒಂಟಿತನದ ಕೊರತೆಯನ್ನು ನೀಗಿಸಲು ಚಲನಚಿತ್ರ ವೀಕ್ಷಿಸುವುದು, ನಾಟಕ, ಚಲನಚಿತ್ರ ಗೀತೆ, ಸುಗಮ ಸಂಗೀತ, ಹರಿಕಥೆ ಆಲಿಸುವಿಕೆ ಸ್ವಲ್ಪ ಮಟ್ಟಿಗೆ ಸಹಾಯಕವಾಗುತ್ತಿತ್ತು. ಆದರೂ ಒಂಟಿತನವೆಂಬ ಭೂತವು ನನ್ನೆಡೆಗೆ ಎಡಬಿಡದೆ ಸುರಿಸುತ್ತಿದ್ದ ಪ್ರಶ್ನಾವಳಿಯ ಸುರಿಮಳೆಗೆ ಉತ್ತರ ಹುಡುಕಲು ತತ್ತರಿಸುವಂತಾಗಿ ಸ್ವಯಂ ಅವಲೋಕನಕ್ಕೆ ದುರ್ಗಮವಾದ ಹಾದಿಯನ್ನು ನಿರ್ದಯೆಯಿಂದ ತೆರೆದಿಟ್ಟಿತ್ತು. ಬೇರೆ ಮಾರ್ಗ ಕಾಣದೆ ಆ ದಾರಿಯನ್ನೇ ತಡವರಿಸುತ್ತಾ ಅನುಸರಿಸಿ ಮುನ್ನಡೆದಾಗ ಗತಕಾಲದಿಂದ ಇಲ್ಲಿಯವರೆಗಿನ ಒಂದೊಂದೇ ಘಟನಾವಳಿಗಳು ಚಲನಚಿತ್ರದಂತೆ ಮರುಕಳಿಸಿ ನಾನು ಮನೆಯವರೊಂದಿಗೆ, ಬಂಧು ಮಿತ್ರರು ಹಾಗೂ ಸಹೋದ್ಯೋಗಿಗಳೊಡನೆ ನಡೆದುಕೊಂಡ ರೀತಿ ನೆನಪಾಗಿ ನನ್ನ ಬಗ್ಗೆ ಕೀಳರಿಮೆ ಎನಿಸಿತು. ಉದಾಹರಣೆಗೆ, ಹಿಂದೆಲ್ಲಾ ಮನೆಯವರು ತಮ್ಮ ಶಕ್ತ್ಯಾನುಸಾರ ಸಮಯಕ್ಕೆ ಸರಿಯಾಗಿ ಇದ್ದುದ್ದರಲ್ಲಿ ಉತ್ತಮವಾದ ಅಡುಗೆಯನ್ನು ಮಾಡಿ ಬಡಿಸಿದಾಗ ಉಪ್ಪಿಲ್ಲ, ಹುಳಿಯಿಲ್ಲ, ಖಾರ ಹೆಚ್ಚು, ಹದವಾಗಿ ಬೆಂದಿಲ್ಲ ಎಂಬ ಕ್ಷುಲ್ಲಕ ಕಾರಣಗಳನ್ನು ನೆಪ ಮಾಡಿಕೊಂಡು, ನಿರ್ದಾಕ್ಷಿಣ್ಯವಾಗಿ ಊಟವನ್ನು ತ್ಯಜಿಸಿ ಎಲ್ಲರ ಮೇಲೂ ಹಾರಾಡಿ ಅವರೆಲ್ಲರ ಮನ ನೋಯಿಸಿದ್ದನ್ನು, ಈಗ ನಾನೇ ಕೈಸುಟ್ಟುಕೊಂಡು ಅಡುಗೆ ತಯಾರಿಸಿ ಊಟ ಮಾಡುವಂತಾದಾಗ ಮೇಲಿನೆಲ್ಲಾ ಕಾರಣಗಳು ನಾನು ಮಾಡಿದ್ದ ಅಡುಗೆಯಲ್ಲಿ ಹಾಸುಹೊಕ್ಕಾಗಿ ನನ್ನನ್ನು ಅಣಕಿಸಿ ನನ್ನ ಬಗ್ಗೆ ಜಿಗುಪ್ಸೆ ತಳೆಯಲು ಶಕ್ತವಾಗುತ್ತಿತ್ತು.

ಕೂಪ ಮಂಡೂಕದಂತಿದ್ದು ಕಣ್ಣಿಗೆ ಕಾಣುವ ಹಾಗೂ ಕೈಗೆಟುಕುವ ಪರಿಧಿಯಲ್ಲಷ್ಟೇ ಜೀವನ ಎಂದೆನಿಸಿದ್ದು, ಸಾಗರದಾಚೆಯಲ್ಲಿ ಜೀವಿಸಲಾರಂಭಿಸಿದ ಬಳಿಕ ನಾನೆಷ್ಟು ಕುಬ್ಜ ಎಂಬ ಸತ್ಯ ಗೋಚರವಾಗಿದ್ದು.

ಜೀವನದುದ್ದಕ್ಕೂ ಸಂಭವಿಸುವ ಘಟನೆಗಳ ಮೇಲೆ ನನ್ನಿಂದ ಯಾವುದೇ ತರಹದ ಹತೋಟಿ ಇಲ್ಲದಿದ್ದರೂ, ಒಳಿತೆನಿಸಿದರೆ ನನ್ನಿಂದ, ಕೆಡುಕೆನಿಸಿದರೆ ಪರರಿಂದ ಎನ್ನುವ ಭಾವನೆಯೇ ಅರ್ಥಹೀನವೆನಿಸುವುದು ಒಳಿತು ಕೆಡುಕುಗಳೇನು ಎಂಬ ವಿಶ್ಲೇಷಣೆ ಮಾಡಿದಾಗ!

ಎರಡು ಮುಖವುಳ್ಳ ನಾಣ್ಯದಂತೆ, ನನಗನಿಸುವ ಒಳಿತು ಮತ್ತೊಬ್ಬರಿಗೆ ಕೆಡುಕು ಅಂತೆಯೇ ನಾನು ಅನುಭವಿಸುವ ಕೆಡುಕು ಮತ್ತೊಬ್ಬರಿಗೆ ಒಳಿತೆನಿಸುವುದರ ಮರ್ಮವೇನು?

ಆ ದ್ವಂದ್ವದ ಪರಿಸ್ಥಿತಿ ಉದ್ಭವಿಸಿದಾಗ ನಾನು ನಾಣ್ಯದ ಎರಡೂ ಮುಖಗಳನ್ನು ಪರಿಗಣಿಸುವಲ್ಲಿ ಯಾಕೆ ಸೋಲುತ್ತಿರುವುದು?

ಪ್ರಾಯಶಃ ಸ್ವಾರ್ಥತೆಯ ಫಲಿತಾಂಶವೇ ಇರಬೇಕೆನಿಸುವುದು. ಹಾಗಾಗಿ ಸ್ವಾರ್ಥತೆಯ ಬೇಲಿ ದಾಟುವ ಮಾರ್ಗ ಅರಸಬೇಕೆಂಬುವ ಬಯಕೆ ಮೂಡಿದ್ದಲ್ಲೇ ಸೊರಗುವ ಪರಿ ಯಾಕೆ?

ವೃತ್ತಿಬದುಕಿನಲ್ಲಿ ಏನೋ ಸಾಧಿಸಿದ್ದೇನೆ ಎಂದೆನಿಸಿದ್ದಾಗಲೆಲ್ಲಾ ಮರುಕ್ಷಣ ಧುತ್ತೆಂದು ಪ್ರತ್ಯಕ್ಷವಾಗುವ ಪ್ರಶ್ನೆ ಸಾಧನೆ ಎಂದರೇನು?

ನಮಗೆಂದೇ ನಾವೇ ಮಾಡಿಕೊಂಡಿರುವ ಅತೀ ಗೋಜಲುಮಯವಾದ ಬಲೆಯೆಂಬ ವ್ಯವಸ್ಥೆಯಲ್ಲಿನ ವಿವಿಧ ಪದರಗಳನ್ನು ದಿನಗೂಲಿಯೆಂಬ ಕನಿಷ್ಟ ಹಂತದಿಂದ ಆರಂಭಿಸಿ ಸಾವಕಾಶವಾಗಿ ಒಂದೊಂದೇ ಪದರವನ್ನು ಕ್ರಮಿಸುತ್ತಾ ಒಂದು ಸಂಸ್ಥೆಯ ಅತ್ಯುನ್ನತವೆನ್ನುವ ಪದವಿಗೇರಿ ಹಿಂದಿರುಗಿ ದಿಟ್ಟಿಸಿದರೆ ಪ್ರತೀ ಪದರಗಳ ನಡುವೆ ಯಾವುದೇ ವ್ಯತ್ಯಾಸವಿಲ್ಲವೆನಿಸಿ ಬಲೆಯಲ್ಲಿ ಸಿಲುಕಿರುವ ಎಲ್ಲರೂ ಒಂದಲ್ಲಾ ಒಂದು ರೀತಿ ಒಬ್ಬರಿಗೊಬ್ಬರು ಕೂಲಿಯಾಳುಗಳೇನೋ ಎಂಬ ಭಾವನೆ!

ಇನ್ನು ಸಾಧಿಸಿದ ವಿಚಾರವಾದರೂ ಏನು?

ನಾವೇ ನಿರ್ಮಿಸಿ ಒಪ್ಪಿಕೊಂಡಿರುವ ವ್ಯವಸ್ಥೆಯ ಮೂಲೋದ್ದೇಶವೇನೋ ಎಂಬಂತೆ ಪ್ರಕೃತಿಯ ಮೇಲಿನ ನಿರಂತರವಾದ ಹಲ್ಲೆ!

ಪ್ರತೀ ಪದರದಲ್ಲೂ ತಾ ಮುಂದು ನಾ ಮುಂದು ಎಂದು ಒಬ್ಬರಿಗೊಬ್ಬರು ಪೈಪೋಟಿಗೆ ಬಿದ್ದ ಫಲಿತಾಂಶವೇನೆಂದರೆ ಈ ಪ್ರಕೃತಿಯ ಮೇಲಿನ ಹಲ್ಲೆಗೆ ನನ್ನ ವತಿಯಿಂದಲೂ ಧಾರಾಳವಾದ ಕೊಡುಗೆ, ನನ್ನ ಶಕ್ತ್ಯಾನುಸಾರ!

ಈ ಗೋಜಲುಮಯ ಗೊಂದಲದ ಗೂಡಾದ ವ್ಯವಸ್ಥೆಯಿಂದ ಹೊರಬರುತ್ತಿರುವ ಉತ್ಪಾದನೆಗಳಾದರೂ ಏನು?

ಆ ಉತ್ಪಾದನೆಗಳ್ಯಾವುವೂ ಇಲ್ಲದಿದ್ದರೂ ಜೀವನ ನಿರ್ವಹಿಸಬಲ್ಲೆವು ಎಂಬ ಸತ್ಯದ ಕಹಿ ಗುಳಿಗೆಯ ಮೇಲೆ ಅವುಗಳಿಲ್ಲದೆ ಜೀವನವಿಲ್ಲ ಎಂಬ ಮಿಥ್ಯದ ಸಕ್ಕರೆಯ ಹೊದಿಕೆಯನ್ನು ಹೊದಿಸಿ ಬೆಚ್ಚಗಿದ್ದೇವೆ!

ಬೆಚ್ಚಗಿದ್ದ ಆ ಕಾವಿಗೆ ಕಾಲಕ್ರಮೇಣ ನಮ್ಮ ಹತೋಟಿ ತಪ್ಪಿ ಜಾಗತಿಕವಾಗಿ ಆಗುತ್ತಿರುವ ಭೂಜ್ವರದ ಅನಾಹುತವನ್ನು ಕಣ್ಣಿದ್ದೂ ಕುರುಡರಂತೆ ಇರುವುದನ್ನು ಕಂಡು ವ್ಯಥೆ ಎನಿಸುವುದು.

ಎರಡು ತಲೆಮಾರಿನ ಅಂತರದಲ್ಲಿ ಆಗಿರುವ ಬದಲಾವಣೆಯ ಪ್ರಮಾಣ ಕಂಡು ಸೋಜಿಗವೆನಿಸುವುದು.

ಪ್ರಸ್ತುತ ಜೀವನ ಶೈಲಿಯಲ್ಲಿ ನಾನು ವ್ಯಯಿಸುವ ವೇಳೆಯನ್ನು ನನ್ನ ದಿನಚರಿಯೊಂದಿಗೆ ಅವಲೋಕಿಸಿದಾಗ ಅನಿಸಿದ್ದು, ಪ್ರತಿಶತ ಹದಿನೈದು ಭಾಗ ಅತ್ತಿಂದಿತ್ತ, ಇತ್ತಿಂದತ್ತ ಗೊತ್ತು ಗುರಿ ಇಲ್ಲದೆ ಅಲೆಯುವ ಅಲೆದಾಟಕ್ಕೆ, ಇಪ್ಪತ್ತೈದು ಭಾಗ ನಿದ್ರೆಗೆ, ನಲವತ್ತು ಭಾಗ ಗೋಜಲುಮಯವಾದ ವ್ಯವಸ್ಥೆಯಲ್ಲಿನ ಪದರಗಳ ನಡುವಿನ ಪೈಪೋಟಿಗೆ, ಹತ್ತು ಭಾಗ ಸ್ವಂತಕ್ಕಾದರೆ ಉಳಿದ ಹತ್ತು ಭಾಗ ಕೆಲಸಕ್ಕೆ ಬಾರದ ವಿಚಾರಗಳಿಗೆ ಮೀಸಲು!

ಹಾಗಾಗಿ, ನಾನು ಕಳೆದುಕೊಂಡಿರುವ ಲೋಕದಲ್ಲಿನ ಅತ್ಯಮೂಲ್ಯವಾದ ವಿಷಯಗಳಿಗೆ ವ್ಯಯಿಸಲು ಎಲ್ಲಿ ಉಳಿದಿದೆ ಸಮಯ?

ನಿರಾಳತೆ ಎನ್ನುವ ಶಬ್ಧವೇ ನನ್ನ ಶಬ್ದಕೋಶದಿಂದ ಮಾಯವಾದ ಬಗೆ ಮಾತ್ರ ವಿಸ್ಮಯವೆನಿಸುವುದು.

ಅರಿತೋ ಅರಿಯದೆಯೋ, ಮನಸ್ಸಿದ್ದೋ ಮನಸ್ಸಿಲ್ಲದೆಯೋ ಸಿಲುಕಿಕೊಂಡಿರುವ ಅಗಾಧವಾದ ಈ ಜಾಲದಿಂದ ವಿಮುಕ್ತಿ ಹೇಗೆ?

ಜಾಗತಿಕವಾಗಿ ಬೆರಳೆಣಿಕೆಯ ಬಂಡವಾಳಶಾಹಿಗಳ ಬಯಕೆ ಪೂರೈಸಲೋಸುಗ ಇಡೀ ವಿಶ್ವಮಾನವರ ಶ್ರಮವನ್ನು ವ್ಯರ್ಥಗೊಳಿಸುತ್ತಿರುವ ಪ್ರಕ್ರಿಯೆಗೆ ಅಂತ್ಯ ಎಂದು?

ಸಂಭವಿಸುವ ಘಟನೆಗಳ ಮೇಲೆ ನನ್ನಿಂದ ಯಾವುದೇ ರೀತಿಯ ಕಡಿವಾಣವಿಲ್ಲವೆಂಬುದೇ ವಾಸ್ತವವಾದರೆ, ಘಟನೆಗಳ ವಿರುದ್ಧದ ಆಯಾಮದ

ಅವಲೋಕನದ ವಿಚಾರವನ್ನು ಆಲೋಚಿಸಲು ಅಂತರಂಗದಲ್ಲಿ ಪ್ರಚೋದಿಸುವ ಶಕ್ತಿ ಯಾವುದು? ಅರಿವಾಗುತ್ತಿಲ್ಲ!

ಪಕ್ಷಿನೋಟದಲ್ಲಿ ಇಡೀ ಪೃಥ್ವಿಯನ್ನು ಗಮನಿಸಿದರೆ ಎರಡು ಮಹತ್ತರ ವರ್ಗಗಳು ಕಾಣಸಿಗುವುದು. ಒಂದು ಬಂಡವಾಳಶಾಹಿಗಳ ವರ್ಗವಾದರೆ ಮತ್ತೊಂದು ಕಾರ್ಮಿಕರ ವರ್ಗ. ಬಂಡವಾಳದ ರೂಪವನ್ನು ಮತ್ತೆ ಮೂರು ವಿಭಾಗಗಳಾಗಿಸಿದರೆ ಮೊದಲನೆಯದು ಹಣ, ಎರಡನೆಯದು ತಾಂತ್ರಿಕತೆ ಮತ್ತು ಮೂರನೆಯದು ಬುದ್ಧಿವಂತಿಕೆ. ಅತೀ ತೀಕ್ಷ್ಣವಾದ ಹಾಗೂ ಮಾರಣಾಂತಿಕವಾದ ಈ ಮೂರು ಅಸ್ತ್ರಗಳನ್ನು ತಮ್ಮ ಬತ್ತಳಿಕೆಯಿಂದ ಸಮಯಕ್ಕೆ ಸರಿಯಾಗಿ ತೆಗೆದು ಪ್ರಯೋಗಿಸುವ ಚಾಕಚಕ್ಯತೆಯಿಂದಲೇ ಜಗದೇಕವೀರರೆಂಬಂತೆ ತಮ್ಮನ್ನು ತಾವು ತೋರ್ಪಡಿಸಿಕೊಳ್ಳಲು ಪಾಡು ಪಡುತ್ತಿರುವ ಬಂಡವಾಳಶಾಹಿಗಳತ್ತ ದೃಷ್ಟಿ ಹಾಯಿಸುವುದೇ ಅಸಹನೀಯ.

ಮನು ಕುಲವು ವಾಸಿಸುತ್ತಿರುವ ಭೂಗೋಳವನ್ನು ವಾಣಿಜ್ಯದ ದೃಷ್ಟಿಯಲ್ಲಿ ವಿಶಾಲವಾಗಿ ವಿಭಾಗಿಸಿದರೆ ಮುಖ್ಯವಾಗಿ ಕಂಡು ಬರುವ ಎರಡು ಭಾಗಗಳೆಂದರೆ ಪಾಶ್ಚಿಮಾತ್ಯರು ಹಾಗು ಏಶಿಯನ್ನರು. ಏಶ್ಯಾದಲ್ಲಿನ ಜನರ ಆಚಾರ ವಿಚಾರ ಹಾಗೂ ಸಂಸ್ಕೃತಿಗಳನ್ನು ಗಮನಿಸಿದರೆ ಸರ್ವವಿಧದಲ್ಲೂ ಏನಂಥಾ ಗುರುತರವಾದ ಬದಲಾವಣೆ ಕಂಡು ಬರದೆ ತಮ್ಮ ಅಸ್ಥಿತ್ವಕ್ಕೆ ಸಾರ್ಥಕತೆ ಎನಿಸುವುದು ಪರರ ಸೇವೆಗೆ ತಮ್ಮನ್ನು ಸಮರ್ಪಿಸಿಕೊಳ್ಳುವ ಮನೋಭಾವದಿಂದ ಎಂದುಕೊಂಡು ಜೀವಿಸುತ್ತಿರುವ ಪರಿ. ಈ ಉತ್ಕೃಷ್ಟ ಉದಾತ್ತ ಜೀವನ ಶೈಲಿಯನ್ನು ಗೌರವಿಸದೆ ಅದನ್ನು ಇಲ್ಲಿನವರ ಬಲಹೀನತೆ ಎಂದು ಪರಿಗ್ರಹಿಸಿದ ಪಾಶ್ಚಿಮಾತ್ಯರು ತಮ್ಮೊಳಗೆ ನಿರಂತರ ಪೈಪೋಟಿಗೆ ಬಿದ್ದು ತಾವೇ ಉತ್ತಮರೆಂದು ಸಾಧಿಸಿ ತೋರಿಸಿಕೊಳ್ಳುವ ಸನ್ನಾಹದಲ್ಲಿ ಅನವರತ ಪ್ರಯತ್ನಿಸುತ್ತಲೇ ತಮ್ಮ ಜೀವಮಾನವನ್ನು ಸವೆಸಿ ಮುಂದಕ್ಕೂ ಸವೆಸಲು ಸನ್ನದ್ಧರಾಗಿ ಸಂಪೂರ್ಣ ಏಶಿಯಾವನ್ನು ರಣರಂಗವಾಗಿ ಮಾರ್ಪಡಿಸಿರುವರು.

ಪುರಾಣ ಹಾಗೂ ಇತಿಹಾಸಗಳ ಪುಟಗಳನ್ನು ತಿರುವಿದರೆ ಗಮನಾರ್ಹವಾಗಿ ಕಂಡು ಬರುವ ಬಂಡವಾಳಶಾಹಿ ಹಾಗೂ ಕಾರ್ಮಿಕ ವರ್ಗಗಳ ಸಂಘರ್ಷ ನಿರಂತರವಾಗಿ ಹರಿದು ತನ್ನ ತಾರತಮ್ಯವನ್ನು ಪಟ್ಟು ಬಿಡದೆ ಉಳಿಸಿಕೊಂಡಿದೆ. ಯುಗಾಂತರಗಳಿಂದ ಅವ್ಯಾಹತವಾಗಿ ನಡೆದು ಬಂದಿರುವ ಈ ಸಮರ ಮುಂದೆಯೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಕಾಪಾಡಿಕೊಳ್ಳುವ ಚರ್ಯೆಗೆ ಯಾವುದೇ ವಿಘ್ನವಿಲ್ಲವೆನ್ನುವುದು ಪ್ರಸ್ತುತ ಪ್ರಪಂಚದಲ್ಲಿ ನಾವು ಸಾಕ್ಷೀಭೂತರಾಗಿ ಪ್ರತ್ಯಕ್ಷವಾಗಿಯೋ ಇಲ್ಲಾ ಪರೋಕ್ಷವಾಗಿಯೋ ಅನುಸರಿಸಿ ಅನುಭವಿಸುತ್ತಿರುವುದೇ

ವಾಸ್ತವಿಕತೆಗೆ ಹಿಡಿದ ದರ್ಪಣ. ನಿರ್ಮಲವಾದ ದೋಷರಹಿತ ದರ್ಪಣವು ಎಂದಿಗೂ ಯಾರಿಗೂ ಅಂಜಿಕೆ ಪಡದೆ ನಿಷ್ಪಕ್ಷಪಾತವಾಗಿ ತೋರುವ ದೃಶ್ಯಕಾವ್ಯ ಎಂದಿಗೂ ಜೀರ್ಣಿಸಿಕೊಳ್ಳಲಾಗದ ಕಟು ಸತ್ಯವನ್ನೇ. ಪುರಾಣದ ಕಾಲದಲ್ಲಿ ಸುರಾಸುರರ ನಡುವೆ ನಡೆದ ಯುದ್ಧಕ್ಕೆ ಧರ್ಮ ಅಧರ್ಮಗಳ ಪರ ವಾದ, ಪ್ರತಿವಾದಗಳೇ ಪ್ರಮುಖ ಕೇಂದ್ರ ಬಿಂದುಗಳಾದರೆ, ಇತಿಹಾಸದಲ್ಲಿ ಅಧರ್ಮದ ಅಪ್ಯಾಯಮಾನವಾದ ಸಂತಾನವಾದ ಅಹಂ ಎನ್ನುವ ಮೂಲಭೂತ ಕಾರಣ ಭೂತಾಕಾರವಾಗಿ ವಿಜೃಂಭಿಸಿ ಘಟಿಸಿದ ಘಟನೆಗಳಿಗೆ ಮೂಕಪ್ರೇಕ್ಷಕನಂತೆ ಗೊತ್ತಿದ್ದೂ ಗೊತ್ತಿಲ್ಲದಂತೆ ಸುಪ್ತವಾಗಿ ತನ್ನ ಕದಂಬ ಬಾಹುಗಳನ್ನು ಜಗದೆಲ್ಲೆಡೆ ಹರಡಿದೆ. ಅಹಂ ಪೀಡಿತ ವ್ಯಕ್ತಿಯೊಬ್ಬನ ಮನೋಭಿಲಾಶೆಯನ್ನು ಈಡೇರಿಸಲು ಆತನನ್ನು ಸುತ್ತುವರಿದ ಬಳಗವೂ ಯಥಾಶಕ್ತಿ ತಮ್ಮ ಅಹಂ ಅನ್ನು ವ್ಯವಸ್ಥಿತವಾಗಿ ಪೋಷಿಸುವ ಒಂದೇ ಧ್ಯೇಯದಿಂದ ಆತನಿಗೆ ಒತ್ತಾಸೆಯಾಗಿದ್ದು ಸಮಾಜದ ಮಿಕ್ಕೆಲ್ಲಾ ಜೀವ ಸಂಕುಲಗಳನ್ನು ತಮ್ಮ ಹತೋಟಿಯಲ್ಲಿ ಇರಿಸಿಕೊಳ್ಳಲು ಸರ್ವದಾ ಕಾರ್ಯನಿಮಿತ್ತವಾಗಿರುವುದು ನಮಗೆಲ್ಲಾ ವೇದ್ಯ. ಪಾಳೆಯಗಾರರಿಂದ ಹಿಡಿದು ಚಕ್ರವರ್ತಿಗಳವರೆಗೆ ತಮ್ಮ ಬಲದ ಯೋಗ್ಯತೆಗನುಸಾರವಾಗಿ ಅಹಂ ಅನ್ನು ಕಾಪಾಡಿಕೊಳ್ಳುವ ನಿಟ್ಟಿನಲ್ಲಿ ಹೋರಾಟ ನಡೆಸಿಕೊಂಡು ಬಂದಿರುವುದು ತೆರೆದ ಪುಸ್ತಕ.

ಪ್ರಸಕ್ತ ಪ್ರಪಂಚದಲ್ಲಿ ಮಾನವ ಸೈನ್ಯದೊಂದಿಗೆ ಕತ್ತಿ ಗುರಾಣಿಯೆಂಬ ಅಸ್ತ್ರಗಳನ್ನು ಹಿಡಿದು ಮುಖಾಮುಖಿಯಾಗಲು ಕೆಲವೇ ಕೆಲವು ಸ್ಥಳಗಳನ್ನು ಹೊರತುಪಡಿಸಿದರೆ, ಬೇರೆಲ್ಲೂ ಅದಕ್ಕೆ ಆಸ್ಪದವಿಲ್ಲವೆನ್ನುವುದನ್ನು ಮನಗಂಡು ಹಣ, ತಾಂತ್ರಿಕತೆ ಮತ್ತು ಬುದ್ಧಿಯೆಂಬ ಶಸ್ತ್ರಗಳೊಂದಿಗೆ ಜಾಗತೀಕರಣವೆಂಬ ಹೆಸರಿನಲ್ಲಿ ನೂತನ ನಿರಂತರ ಹೋರಾಟಕ್ಕೆ ನಾಂದಿ ಹಾಡಿದ್ದಾಗಿದೆ. ತಾಂತ್ರಿಕತೆಯೆನ್ನುವ ಮಹಾನ್ ಮಾಂತ್ರಿಕನನ್ನು ಬಳಸಿ ಗಳಿಸಿದ ಅನಾಹುತಗಳನ್ನು ಭರಿಸಲಾಗದೆ ಪಾಶ್ಚಾತ್ಯರು ಉಪಾಯವಾಗಿ ಅವೆಲ್ಲಾ ಅನಾಹುತಗಳನ್ನು ತಮ್ಮಲ್ಲಿಂದ ಅತೀ ಜೋಪಾನವಾಗಿ ಗಡಿಪಾರು ಮಾಡಿ ಪ್ರಪಂಚದ ಮಿಕ್ಕೆಲ್ಲಾ ಕಡೆಗೆ ಸಾಗಹಾಕಿದ ರೀತಿಯಂತೂ ಖಂಡನೀಯ. ತಾಂತ್ರಿಕತೆಯೆಂಬ ಮಾಂತ್ರಿಕನ ಗಾರುಡಿಗೆ ಮಾರು ಹೋಗಿ ನೋಟ ಚೆಂದಿದ್ದರೆ ಸಾಕು ಆಟವೇನು ಮಾಡೀತೆಂಬ ಭಂಡತನದೇ, ಸೇವೆಯೇ ಪರಮ ಗುರಿ ಎಂಬ ಕುರುಡು ನಂಬಿಕೆಯಲ್ಲಿ ಗಳಿಸುವ ಅಷ್ಟಿಷ್ಟು ಕ್ಷಣಿಕದ ಸುಖಕ್ಕೆ ಮನಸೋತು ಜೋಲಿ ಹೊಡೆಯುತ್ತಾ ಸಾಗುತ್ತಿರುವ ಏಶಿಯದವರ ಮನೋಭಾವಕ್ಕೆ ಏನನ್ನುವುದೋ ನಾಕಾಣೆ. ಜಾಗತೀಕರಣ ಎನ್ನುವ ಮಹಾಸಂಗ್ರಾಮ ಸಾರಲು ಬಳಸಿದ ಹಣ, ತಾಂತ್ರಿಕತೆ ಮತ್ತು ಬುದ್ಧಿಯೆಂಬ ಶಸ್ತ್ರಗಳೊಂದಿಗೆ

ಸನ್ನದ್ಧರಾಗಿ ಪಾಶ್ಚಾತ್ಯರು ಜಗದೆಲ್ಲೆಡೆ ವಿಜೃಂಭಿಸಿ ಯಶಸ್ಸಿನ ಗೆಲುವನ್ನು ಬಲು ಸುಲಭವಾಗಿ ತಮ್ಮದಾಗಿಸಿಕೊಂಡಾಗಿದೆ. ಈ ಕರಾಳ ಕೃತ್ಯಕ್ಕೆ ತಮ್ಮನ್ನು ಒಗ್ಗಿಸಿಕೊಂಡಂತೆ ನಟಿಸಿ ಮುಂದಿನ ಭೀಕರ ಘಟನಾವಳಿಯ ಅರಿವಾದ ಕೆಲವೇ ಕೆಲವರು ಅಲ್ಲಲ್ಲಿ ದನಿಯೆತ್ತುತ್ತಿರುವುದು ಗಮನಾರ್ಹ ಮತ್ತು ಪ್ರಶಂಸನೀಯ.

ಜಾಗತೀಕರಣವೆಂಬ ಮಹಾನ್ ಯುದ್ಧದೊಂದಿಗೆ ಪಾಶ್ಚ್ಯಾತೀಕರಣವೆನ್ನುವ ಮಾರಿಯು ತನ್ನ ಗರ್ಭದಲ್ಲಿ ಹುದುಗಿಸಿಕೊಂಡಿದ್ದ ಮೋಹವೆಂಬ ಉಪದ್ರವದ ಗರ್ಭಪಾತವಾಗಿ ಎಲ್ಲೆಡೆ ಹಾಸುಹೊಕ್ಕಾಗಿ ಪಸರಿಸಿ ತನ್ನ ಕರಾಳ ಛಾಯೆಯನ್ನು ಹರಡಿ ಮಂಕು ಬೂದಿ ಎರೆಚಿದೆ. ಸಾರಾಸಗಟಾಗಿ ಮಂಕು ಬೂದಿ ಬಳಿಸಿಕೊಂಡು ವೈವಿಧ್ಯಮಯವಾದ ಸಂಸ್ಕೃತಿಯ ತವರೂರಾಗಿದ್ದ ಏಶಿಯನ್ನರು ಈಗ ಏಕತಾನತೆಯೆಂಬ ಮತ್ತಿನಲ್ಲಿ ಮುಳುಗಿ ತೇಲುವ ಹಂತಕ್ಕೆ ತಲುಪಿದ್ದಾಗಿದೆ. ಜಾಗತೀಕರಣವೆಂಬ ಮಹಾಸಂಗ್ರಾಮದಲ್ಲಿ ಪಾಲ್ಗೊಂಡಿದ್ದರ ಫಲಿತಾಂಶವೆಂದರೆ ಜಾಗತಿಕವಾಗಿ ಎಲ್ಲರೂ ಸಮಾನರು ಎಂಬ ಕನ್ನಡಿಯೊಳಗಿನ ಗಂಟನ್ನು ನೋಡಿಕೊಂಡೇ ಅನುಭವಿಸುತ್ತಿರುವ ಅನಾಹುತಗಳು ಒಂದೇ ಎರಡೇ? ವೇದೋಪನಿಷತ್ತುಗಳ ಸಾರಾಂಶದಂತೆ, ಅನ್ಯರ ಬಗ್ಗೆ ಈರ್ಷ್ಯೆ ಪಡದೆ ಮನುಕುಲವು ತನ್ನೊಡನೆ ಏನಿದೆಯೋ ಅದರಲ್ಲೇ ತೃಪ್ತಿಯನ್ನು ಅರಸುತ್ತಾ ಸಂತೋಷದಿಂದ ಬಾಳಿ ಬದುಕನ್ನು ಸಾರ್ಥಕ್ಯ ಮಾಡಿಕೊಳ್ಳುವುದನ್ನು ಬಿಟ್ಟು ತಾನು ಎಲ್ಲರಿಗಿಂತಲೂ ಮಿಗಿಲಾಗಿರಬೇಕು ಎನ್ನುವ ಮೃಗತೃಷ್ಣೆಯ ಸವಾರಿ ಮಾಡುತ್ತಾ ಉತ್ತುಂಗಕ್ಕೇರುವೆವು ಎಂದುಕೊಂಡು ಅಧಃಪಾತಕ್ಕಿಳಿಯುತ್ತಿರುವ ಪರಿವೆ ಇಲ್ಲದೇ ಬೃಹದಾಕಾರವಾದ ಇಡೀ ಖಗೋಳವು ವಾಸ್ತವವಾಗಿ ಕುಬ್ಜವಾಗದಿದ್ದರೂ ಮಾನಸಿಕವಾಗಿ ಕುಬ್ಜವಾದ ಹಾಗೆ ಭ್ರಮೆ ಮೂಡಿಸಿಕೊಂಡು ಮನುಜ ಕುಲವೆಲ್ಲಾ ಸನಿಹವಾದೆವು ಎಂಬ ಭ್ರಮೆಯಿಂದ ಒಳಿತು ಕೆಡುಕುಗಳ ವಿಶ್ಲೇಷಣೆ ಮಾಡದೆ ಮಾನವ ಕುಲದ ಮೂಲಭೂತ ಹಕ್ಕುಗಳನ್ನು ಕಳೆದುಕೊಂಡು ತಮ್ಮ ಮೆದುಳನ್ನು ಪರಭಾರೆ ಮಾಡಿ ಕಾಯಕವೆನ್ನುವ ನಿಷ್ಪ್ರಯೋಜಕ ಅನಾಹುತ ಸದೃಶದ ಕೈಂಕರ್ಯದ ಬೆನ್ನನ್ನೇರಿ ನೈಸರ್ಗಿಕ ಸಂಪನ್ಮೂಲಗಳನ್ನು ಪಣವಾಗಿಟ್ಟು ಜನಾಂಗೀಯ ಘರ್ಷಣೆಗೆ ಎಡೆ ಮಾಡಿಕೊಂಡು ಭಾಷಾಭಿಮಾನವನ್ನು ತೊರೆದು ತಮ್ಮ ಆರೋಗ್ಯವನ್ನು ಹದಗೆಡಿಸಿಕೊಂಡು ಪ್ರಕೃತಿಯ ಸರ್ವ ನಾಶಕ್ಕೆ ರತ್ನಗಂಬಳಿ ಹಾಸುವಂತಾಗಿದೆ.

ಪಾಶ್ಚಾತ್ಯರ ಸೊಕ್ಕಡಗಿಸಲು ಪ್ರಸ್ತುತ ಇಡೀ ಏಶಿಯಾದಲ್ಲೇ ಸಡ್ಡು ಹೊಡೆದು ನಿಂತಿರುವ ರಾಷ್ಟ್ರವೆಂದರೆ ಚೀನಾ ಒಂದೇ. ಸುಮಾರು ನಾಲ್ಕು ದಶಕಗಳ ಅವಧಿಯಲ್ಲಿ ಪಾಶ್ಚಿಮಾತ್ಯರ ಸಕಲ ಗುಣಗಳನ್ನು ಮೈಗೂಡಿಸಿಕೊಂಡು ತಿರುಗುಬಾಣವಾಗಿರುವ ಪರಿ ಶ್ಲಾಘನೀಯ! ಪ್ರಕೃತಿಯು ತನ್ನ ಸಮತೋಲನವನ್ನು ಕಾಪಾಡಿಕೊಳ್ಳಲು ಅನಾದಿ

ಕಾಲದಿಂದಲೂ ಪರಿಪಾಲಿಸುತ್ತಾ ಬಂದಿರುವ ಚರ್ಯೆಯ ಪ್ರತೀಕವಾದ ಮೇಲೇರಿದವ ಕೆಳಗಿಳಿಯಲೇಬೇಕೆಂಬಂತೆ ಪಾಶ್ಚಾತ್ಯರ ಬರ್ಬರತೆಯನ್ನು ಹತ್ತಿಕ್ಕಲು ಚೀನಿಯರನ್ನು ಎತ್ತಿ ಕಟ್ಟಿದೆ! ಈ ಪರಿಸ್ಥಿತಿಯಿಂದ ಆಗುವ ಉಪಯೋಗವಾದರೂ ಏನು? ಪ್ರಸ್ತುತದಲ್ಲಿ ಪಾಶ್ಚಾತ್ಯರಿಗೆ ಸಡ್ಡು ಹೊಡೆದರೂ ಮುಂದೆ ಚೀನವೂ ಪಾಶ್ಚಿಮಾತ್ಯರಿಗಿಂತ ತಾನು ಏನು ಕಡಿಮೆ ಇಲ್ಲದಂತೆ ಮೆರೆಯುವ ಲಕ್ಷಣಗಳಾಗಲೇ ಕಂಡು ಬರುತ್ತಿವೆ!

ನಿತ್ಯಜೀವನದಲ್ಲಿ ನಾನು ಶ್ರವಣಿಸುವ ಹಾಗೂ ಬಳಸುವ ಕೆಲವು ಪದಗಳಲ್ಲಿನ ಪ್ರತೀ ಅಕ್ಷರಗಳನ್ನು ಅವಲೋಕಿಸಿದಾಗ ನನಗೆ ಅರ್ಥೈಸಿದ್ದು ಹೀಗೆ.

**ತಾ** ನು ನೊಂದರೂ ತನ್ನ ಕರುಳು ಬಳ್ಳಿಯನ್ನು ಜೋಪಾನವಾಗಿ
**ಯಿ** ರಿಸಲು ತನ್ನನ್ನೇ ತೇಯ್ದುಕೊಳ್ಳುವ ಮಹಾನ್ ಚೇತನ

**ತಂ** ಗುದಾಣದಲ್ಲಿ ತನ್ನ ಸಂಸಾರವನ್ನು ನೆಮ್ಮದಿಯಿಂದಿಡಲು ಎಡಬಿಡ
**ದೆ** ದುಡಿದು ತನ್ನ ಜೀವಮಾನ ಕಳೆಯುವ ಅನನ್ಯ ಜೀವಿ

**ಜ** ಗದಲ್ಲಿನ ಆಮಿಷಗಳ ಬಗ್ಗೆ
**ನ** ಗಣ್ಯ ಭಾವವಿರಿಸಿಕೊಂಡು ಸೂಕ್ತವಾದ ದಾರಿಯಲ್ಲಿ
**ನ** ಡೆದು ಪುರುಷಾರ್ಥ ಸಾಧಿಸಲು ಪ್ರಕೃತಿ ಕಲ್ಪಿಸಿದ ಸುವರ್ಣಾವಕಾಶ

**ಉ** ನ್ನತ ಜೀವನಕ್ಕೆ ಅಡಿ
**ಪಾ** ಯವನ್ನು ಹಾಸಿ ಅದರ
**ಧ್ಯಾ** ನದಲ್ಲೇ ಜೀವನವನ್ನು
**ಯ** ಶಸ್ವಿಗೊಳಿಸಲು ಪ್ರೇರೇಪಿಸುವವರು

**ಬ** ದುಕಿರುವವರೆಗೂ ಎಡಬಿಡದೆ
**ದು** ಡಿಯುತ್ತಾ ಸಕಲ ಜೀವಿಗಳ ಸಂ
**ಕು** ಲವನ್ನು ಪೋಷಿಸುವ ಆದ್ಯ ಕರ್ತವ್ಯ

**ಗು** ರಿ ಏನೆಂದು ಅರಿಯದಂದಿನಿಂದಲೇ ಜೀವನಕ್ಕೊಂದು ದಿಕ್ಕನ್ನು
**ರು** ಜುವಾತು ಪಡಿಸಲು ನಿಸ್ವಾರ್ಥದಿಂದ ಶ್ರಮಿಸುವ ಚೇತನ

**ಸ್ನೇ** ಹ ಬಂಧನವನ್ನು ತನ್ನ ಸ್ವಂತ
**ಹಿ** ತಕ್ಕೆ ದುರುಪಯೋಗಪಡಿಸಿಕೊಳ್ಳದೆ
**ತ** ನ್ಮೂಲಕ ಮಾದರಿಯಾಗಿ ನಡೆಯುವ ಸಭ್ಯಸ್ಥ

**ಮ** ನಸ್ಸು, ಮೈಗಳ ನವಿರಾದ ಬೆಸುಗೆಯೊಂದಿಗೆ
**ದು** ಗುಡ ದುಮ್ಮಾನಗಳು ಬಾಳ ಪಯಣದಲ್ಲಿ ಎಡತಾಕದಂತೆ ಬದುಕು
**ವೆ** ವೆಂದು ಮಾಡಿಸುವ ಅಗ್ನಿಸಾಕ್ಷಿ ಕಾರ್ಯ

**ಜೀ** ತದಾಳಿನ ತೆರದಿ ಕರ್ತವ್ಯಕ್ಕೆ
**ವ** ಶನಾಗಿ ಬಾಳ್ವೆ
**ನ** ಡೆಸಲು ಇರುವ ಅವಕಾಶ

**ಸ** ರಿಯಾದ ವೇಳೆಗೆ ಅವಶ್ಯಕತೆಯನ್ನು ಅರಿತು
**ಹಾ** ಸುಹೊಕ್ಕಾಗಿ ಪೂರೈಸಿ ಪ್ರತಿಫಲಾಪೇಕ್ಷೆ
**ಯ** ನ್ನು ಆಶಿಸದ ಕ್ರಿಯೆ

**ವಿ** ಧಿಯ ಆಣತಿಯಂತೆ ಕಾಯೇನಾ
**ವಾ** ಚಾ, ಮನಸಾ ಒಪ್ಪಿ ಬದುಕೆಂಬ ಬಂಡಿ
**ಹ** ಳಿ ತಪ್ಪದಂತೆ ಜೋಪಾನವಾಗಿ ನಿಭಾಯಿಸುವ ಜವಾಬ್ದಾರಿ

**ಹಿ** ತವನ್ನು ಬಯಸುತ್ತಾ ನಂಬಿದವರ ಬಾಳದೀವಿಗೆಗೆ
**ತೈ** ಲ ಸುರಿದು ಪೋ
**ಷಿ** ಸುವ ಮಹಾನುಭಾವ

**ಸಾ** ಧಿಸಿದ್ದ ಏನೋ ಎಂದು ಪರಾಕು ಹಾಡದೇ ಆತನು ಏನನ್ನು
**ವು** ಳಿಸಿದ್ದಾನೆ ತನ್ನ ತರುವಾಯ ಈ ಜಗಕೆ ಎಂದು ಅವಲೋಕಿಸುವ ಸಮಯ



# ಅಧ್ಯಾಯ ೧೦

## ಮರಳಿ ಗೂಡಿಗೆ(?)

ಮಡದಿ ಆರು ತಿಂಗಳಿಗೊಮ್ಮೆ ಹಾಗೂ ಮಗ ವರ್ಷಕ್ಕೊಮ್ಮೆ ಚೀನಾಕ್ಕೆ ಭೇಟಿ ಕೊಡುತ್ತಿದ್ದರು. ಅವರ ಪ್ರಥಮ ಭೇಟಿಯಲ್ಲಿ ನಾಲ್ಕು ದಿನಗಳು ಚೀನಾದ ರಾಜಧಾನಿಯಾದ ಬೀಜಿಂಗ್ ಅನ್ನು ಸುತ್ತಿ ಬರಲು ಹೊರಟೆವು–ನನ್ನ ಸಹಾಯಕಿ ಲಿಯಾಂಗ್ ಎಂಬುವಳೊಡನೆ. ನಾವು ಹೊರಟ ಅವಧಿ ಮೇ ತಿಂಗಳ ರಜೆಯಲ್ಲಿ. ಇಡೀ ಪ್ರಯಾಣದುದ್ದಕ್ಕೂ ನಾವು ಎದುರಿಸಿದ ಜನಸಾಗರದ ಪ್ರಮಾಣ ಮಾತ್ರ ಅನಂತ ಹಾಗೂ ಅಸಹನೀಯ! ಚೀನಾದಲ್ಲಿ ಚಾಂದ್ರಮಾನ ಕ್ಯಾಲೆಂಡರ್‌ನ ಅನುಸಾರವಾಗಿ ಆಚರಿಸುವ ಹೊಸ ವರ್ಷಕ್ಕೆ ಫೆಬ್ರವರಿಯಲ್ಲೂ, ಕಾರ್ಮಿಕರ ದಿನಾಚರಣೆಯ ಅಂಗವಾಗಿ ಮೇ ತಿಂಗಳಿನಲ್ಲಿ ಮತ್ತು ಅಕ್ಟೋಬರ್ ತಿಂಗಳಲ್ಲೂ ಲಿಬರೇಷನ್ ಡೇ ಪ್ರಯುಕ್ತ ವರ್ಷಕ್ಕೆ ಮೂರು ಬಾರಿ ಒಂದು ವಾರದ ಅವಧಿಯ ರಾಷ್ಟ್ರೀಯ ರಜೆಯ ಘೋಷಣೆಯಾಗುತ್ತದೆ. ಇದನ್ನು ಮೂರು ಬಂಗಾರದ ವಾರ ಎನ್ನುವುದು ಇಲ್ಲಿನವರ ವಾಡಿಕೆ.

ಈ ಬಂಗಾರದ ವಾರಗಳಲ್ಲಿ ಇಡೀ ದೇಶಕ್ಕೆ ಸಂಚಲನ ಉಂಟಾಗಿ ಜನಸ್ತೋಮವೆಲ್ಲಾ ಅತ್ತಿಂದಿತ್ತ ತಿರುಗುವ ಭರದಲ್ಲಿ ಎಲ್ಲೆಡೆ ಸೂಜಿ ಬಿದ್ದರೂ ನೆಲ ತಲುಪದ ಪರಿಸ್ಥಿತಿ ಉಂಟು ಮಾಡಿರುತ್ತಾರೆ. ಇದರ ಅರಿವಿಲ್ಲದೆ ನಾವು ನಮ್ಮ ತಪ್ಪು ನಿರ್ಧಾರದಿಂದ ಪಟ್ಟ ಬವಣೆ ಅಷ್ಟಿಷ್ಟಲ್ಲ. ಇಷ್ಟೆಲ್ಲಾ ಬವಣೆಗಳ ನಡುವೆಯೂ ಇಲ್ಲಿನ ಬೇಸಿಗೆ ಅರಮನೆ, ತಿಯಾನ್ಮನ್ ಚೌಕ, ಫ಼ರ್ಬಿಡನ್ ನಗರವಲ್ಲದೆ ಇತರ ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿ ನೀಡಿದ ತರುವಾಯ ಚೀನಾ ದೇಶದ ಬಹು ಮುಖ್ಯ ಆಕರ್ಷಣೆಯಾದ ಮಹಾಗೋಡೆಯನ್ನು ತಲುಪಿ ಅದರ ಮೇಲೆ ಅಡಿಯಿಟ್ಟು ಸ್ಪರ್ಶಿಸಿದಾಗ ಆದ ಸಂತೋಷ ಅವರ್ಣನೀಯ. ಒಡನೆಯೇ ಅನಿಸಿತ್ತು ಈ ಮಹಾನ್

ಗೋಡೆಯ ಪ್ರಸ್ತುತ ಉಪಸ್ಥಿತಿಗೆ ಅದೆಷ್ಟು ಜೀವಿಗಳ ಶ್ರಮ ಹಾಗೂ ಜೀವ ಬಲಿದಾನವಾಗಿರಬೇಕು?

ಫಿಲಿಪೀನ್ಸ್‌ನ ಎ.ಪಿ.ಸಿ ಕಾರ್ಖಾನೆಯಲ್ಲಿನ ನನ್ನ ಮಾಜಿ ಸಹೋದ್ಯೋಗಿ ಶ್ರೀಯುತ ನಾಗೇಂದ್ರನಾಥ್ ಶಂಕರಪ್ಪ, ಎಂಬುವರು ಚೀನಾದ ಶಿಯಾಮನ್ ಎಂಬ ನಗರದಲ್ಲಿರುವ ಶ್ನೈಡರ್ ಎಲೆಕ್ಟ್ರಿಕ್ ಕಾರ್ಖಾನೆಗೆ ವರ್ಗಾಯಿಸಲ್ಪಟ್ಟ ನಂತರ ನನ್ನ ಅವರ ಭೇಟಿ ಪ್ರತೀ ತಿಂಗಳು ಶಾಂಘೈನಲ್ಲಾಗುತ್ತಿತ್ತು. ಮೂರ್ನಾಲ್ಕು ತಿಂಗಳಾದ ಬಳಿಕ ಆ ಕಾರ್ಖಾನೆಯಲ್ಲಿನ ಖರೀದಿ ವಿಭಾಗಕ್ಕೆ ಒಬ್ಬ ನಂಬಿಕಸ್ತರ ಅವಶ್ಯಕತೆ ಇದೆಯೆಂದೂ, ನಿನ್ನನ್ನು ಪರಿಗಣಿಸುವ ಆಲೋಚನೆಯಲ್ಲಿದ್ದೇನೆ, ನಿನ್ನ ಅಭಿಪ್ರಾಯ ಏನೆಂದರು. ಚೀನಾದ ಉದ್ದಗಲಕ್ಕೂ ಹರಡಿ ಮೂವತ್ತೆರಡು ಉತ್ಪಾದನಾ ಘಟಕಗಳನ್ನು ಹೊಂದಿರುವ ಶ್ನೈಡರ್ ಎಲೆಕ್ಟ್ರಿಕ್ ಬೃಹತ್ತಾದ ಬಹುರಾಷ್ಟ್ರೀಯ ಕಂಪೆನಿಯಾಗಿದ್ದು, ಅಷ್ಟು ಸುಲಭವಾಗಿ ಅಲ್ಲಿ ಸೇವೆ ಸಲ್ಲಿಸುವ ಅವಕಾಶ ಲಭಿಸುವುದಿಲ್ಲ. ಈಗ ತಾನಾಗೇ, ಅಂತಹ ಅವಕಾಶ ಪರಿಚಯದವರ ಮೂಲಕ ಬಂದಿದೆ. ಖಾತರಿಯಾಗಿ ಅಲ್ಲಿ ನನ್ನ ಜ್ಞಾನವೃದ್ಧಿಗೆ ಹಾಗು ಯೋಗ್ಯತೆಯ ಒರೆ ಹಚ್ಚಲು ಬೇಕಾದಷ್ಟು ಅವಕಾಶಗಳಿರುತ್ತವೆ ಎಂಬ ಭರವಸೆ ಇದ್ದುದ್ದರಿಂದ, ಸದ್ಯದ ಕೆಲಸದ ಜವಾಬ್ದಾರಿಯನ್ನು ಮುಂದೆ ಒಪ್ಪಿಕೊಳ್ಳುವ ಕೆಲಸದ ಜವಾಬ್ದಾರಿಯ ಜೊತೆಗೆ ತಾಳೆ ಹಾಕಿ ಮಂಥನ ನಡೆಸಿ ಕಡೆಗೆ ನನ್ನ ಹೊಸ ಉದ್ಯೋಗದ ಖಾತೆಯನ್ನು ಶ್ನೈಡರ್ ಎಲೆಕ್ಟ್ರಿಕ್‌ನಲ್ಲಿ ಯಾಕೆ ತೆರೆದು ಬಂದ ಸುವರ್ಣಾವಕಾಶವನ್ನು ಉಪಯೋಗಿಸಿಕೊಳ್ಳಬಾರದೆಂದು ನನಗೆ ನಾನೇ ಪ್ರಶ್ನೆ ಹಾಕಿಕೊಂಡು ಉತ್ತರವನ್ನು ನಿರ್ಧರಿಸಿದ್ದೆ.

ಮುಂದೆ ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿದ್ದ ಕಾರ್ಖಾನೆಯ ಮಾಲೀಕರಿಗೆ ವಿಷಯವನ್ನು ಹೇಗೆ ತಿಳಿಸುವುದೆನ್ನುವ ವಿಚಾರದಲ್ಲಿ ಸಾಕಷ್ಟು ಚಿಂತನೆ ಮಾಡಿ ಮಾನಸಿಕವಾಗಿ ಸಿದ್ಧನಾಗಿದ್ದೆ ಅವರ ಬರುವಿಕೆಗಾಗಿ. ನನ್ನ ನಿರ್ಧಾರವನ್ನು ತಿಳಿದ ಮಾಲೀಕರಿಗೆ ನನ್ನನ್ನು ಬಿಟ್ಟುಕೊಡಲು ಸುತಾರಾಂ ಇಷ್ಟವಿರಲಿಲ್ಲ. ಬಹಳ ಚರ್ಚೆಯಾದ ಮೇಲೆ ಒಲ್ಲದ ಮನಸ್ಸಿನಿಂದ ಒಪ್ಪಿಗೆ ಸೂಚಿಸಿ ಹೊರಡುವಾಗ ಅವರೆಂದರು ವಿಶಾಲ ಹೃದಯದಿಂದ "ನಮ್ಮ ಕಂಪೆನಿಯ ಬಾಗಿಲು ನಿಮಗಾಗಿ ಯಾವತ್ತೂ ತೆರೆದಿರುತ್ತೆ".

ದುರ್ದೈವವೆಂಬಂತೆ, ನನ್ನ ತೆರವಿನ ವಿಷಯ ಅರಿತ ನನ್ನ ಸಹೋದ್ಯೋಗಿ ವೃಂದದಲ್ಲಿ ಹಣಕಾಸು ಮತ್ತು ಮಾನವಸಂಪನ್ಮೂಲ ವಿಭಾಗಗಳನ್ನು ಹೊರತು ಪಡಿಸಿ ಮಿಕ್ಕ ಆರು ವಿಭಾಗಾಧಿಕಾರಿಗಳು ನನ್ನೊಟ್ಟಿಗೆ ಹೊರ ಬರಲು ನಿರ್ಧರಿಸಿದ್ದರು!

ನನ್ನ ವಿದಾಯಕ್ಕಿದ್ದ ಕಾರಣವನ್ನು ತಿಳಿಹೇಳಿ ನೀವುಗಳು ಹೀಗೆ ಸಾರಾಸಗಟಾಗಿ ಹೊರಡುವುದು ಕಾರ್ಖಾನೆಗೆ ಶ್ರೇಯಸ್ಸಲ್ಲ ಹಾಗೂ ನನಗೆ ಕಪ್ಪು ಮಸಿ ಬಳಿದಂತಾಗುವುದಲ್ಲದೇ ಮಾಲೀಕರು ನಾನೇ ನಿಮ್ಮನ್ನು ಪ್ರಚೋದಿಸಿದ್ದೇನೆಂದು ತಪ್ಪು ತಿಳಿಯಬಹುದು ಎಂದು ಎಷ್ಟೇ ಮನವಿ ಮಾಡಿದರೂ ಅವರೆಲ್ಲರ ನಿರ್ಧಾರ ಬದಲಿಸಲಾಗಲಿಲ್ಲ!

ಅವರು ಕೊಟ್ಟ ಕಾರಣ ನನ್ನ ಹಿಂದಿದ್ದ ಇಬ್ಬರು ಮಾಜಿ ನಿರ್ದೇಶಕರುಗಳ ನಡವಳಿಕೆಯನ್ನು ನನ್ನೊಂದಿಗೆ ಹೋಲಿಸಿ, ಮುಂಬರುವ ನಿರ್ದೇಶಕರಲ್ಲಿ ಖಂಡಿತ ನಿಮ್ಮ ಗುಣಗಳನ್ನು ನಿರೀಕ್ಷಿಸುವುದಕ್ಕಾಗುವುದಿಲ್ಲ ಹಾಗಾಗಿ ಬೇರೆ ಕಡೆ ಅವಕಾಶ ಅರಸುವೆವು ಎಂದು! ಇದನ್ನಾಲಿಸಿದ ನಂತರ ನಾನು ನನ್ನ ಬಗ್ಗೆ ಹೆಮ್ಮೆ ಪಡುವುದೋ ಅಥವ ವ್ಯಥೆ ಅನುಭವಿಸುವುದೋ ಎಂದು ತಿಳಿಯಲಾಗದ ದ್ವಂದ್ವದಲ್ಲಿ ಸಿಲುಕಿ ಮೂಕಪ್ರೇಕ್ಷಕನಂತಾಗಿದ್ದೆ.

ನಾಲ್ಕು ತಿಂಗಳು ಬೇಕಾಯಿತು ಪ್ರಸ್ತುತ ಜವಾಬ್ದಾರಿಯನ್ನು ವರ್ಗಾಯಿಸಿ, ಭಾರತಕ್ಕೆ ಮರಳಿ ಮತ್ತೆ ವೀಸಾ ಪಡೆದು ಚೀನಾದ ಶಿಯಾಮನ್ ನಗರದಲ್ಲಿದ್ದ ಶ್ನೈಡರ್ ಎಲೆಕ್ಟ್ರಿಕ್ ಕಾರ್ಖಾನೆಗೆ ದಾಖಲಾಗಲು.

ಇಲ್ಲಿಯವರೆಗಿನ ನನ್ನ ಮೂರೂವರೆ ವರ್ಷಗಳ ಚೀನಾದಲ್ಲಿನ ವಾಸ್ತವ್ಯದಲ್ಲಿ ದೇಶದ ಪ್ರಮುಖ ನಗರಗಳನ್ನು, ಪ್ರೇಕ್ಷಣೀಯ ಸ್ಥಳಗಳನ್ನು ವೀಕ್ಷಿಸುವ ಹೇರಳ ಅವಕಾಶವನ್ನು ಯಥಾವತ್ತಾಗಿ ಉಪಯೋಗಿಸಿಕೊಂಡಾಗಿತ್ತು.

ಅದರ ಫಲವಾಗಿ ಬೀಜಿಂಗ್, ನ್ಯಾನ್‌ಜಿಂಗ್, ಶಾಂಘೈ, ಶೆನ್‌ಝೆನ್, ಯಾಂಗ್‌ಝೌ, ಹಾಂಗ್‌ಝೌ, ಚಾಂಗ್‌ಝೌ, ಹೂನಾನ್, ವೂಷಿ, ನಿಂಗ್‌ಬೋ, ಚಾಂಗ್‌ಷಾ, ಗ್ವಾಂಗ್‌ಝೌ ಹಾಗೂ ಸೂಜೌ ನಗರದ ಸುತ್ತ ಮುತ್ತಲಿನ ಸ್ಥಳಗಳನ್ನು ಭೇಟಿ ಮಾಡಿಯಾಗಿತ್ತು. ಪ್ರವಾಸದ ಅವಧಿಯಲ್ಲಿ ಯಾರಾದರು ಸಹೋದ್ಯೋಗಿಗಳು ಜೊತೆಯಲ್ಲಿದ್ದು ಮಾರ್ಗದರ್ಶನ ಮಾಡುತ್ತಿದ್ದರು.

ಇಲ್ಲಿನ ಯಾವುದೇ ನಗರಗಳ ಬಗ್ಗೆ ಹೆಮ್ಮೆ ಅನ್ನಿಸುವುದು ಶುಚಿತ್ವಕ್ಕೆ ಇಲ್ಲಿನ ಅಧಿಕಾರಿಗಳು ನೀಡಿರುವ ಪ್ರಾಮುಖ್ಯತೆ! ಪ್ರಪಂಚದಲ್ಲೇ ಅತೀ ಹೆಚ್ಚು ಜನಸಂಖ್ಯೆಯನ್ನು ಹೊಂದಿರುವ ದೇಶವಾದರೂ, ಇಲ್ಲಿನ ಪ್ರಜೆಗಳ ಕೊಳಕುತನದ ಪರಮಾವಧಿ ಇದ್ದರೂ ಅದನ್ನು ನಿಯಂತ್ರಣಗೊಳಿಸಲು ನೇಮಿಸಿರುವ ಸಿಬ್ಬಂದಿ ಹಾಗೂ ಸಿಬ್ಬಂದಿಯ ಕಾರ್ಯವೈಖರಿ ಎಂಥಹವರನ್ನೂ ಬೆರಗುಗೊಳಿಸುತ್ತದೆ. ಇಡೀ

ನಗರವನ್ನು ನಿಯಮಿತ ಕಾಲಕ್ಕೆ ಗುಡಿಸಿ, ನೀರು ಹಾಕಿ, ರಸ್ತೆ ಬದಿಯ ಗಿಡಗಳನ್ನು ಒಪ್ಪ ಓರಣವಾಗಿಡುತ್ತಾರೆ.

ಇನ್ನು ನಿತ್ಯ ಜೀವನದ ಪ್ರಾಥಮಿಕ ಬೇಡಿಕೆಗಳಾದ ನೀರು, ಗ್ಯಾಸ್, ವಿದ್ಯುತ್ಶಕ್ತಿ, ದೂರವಾಣಿ ಹಾಗೂ ಅಂತರ್ಜಾಲಗಳ ಸಂಪರ್ಕಗಳಂತು ಉನ್ನತ ಮಟ್ಟದಲ್ಲಿದ್ದು ನಿರಂತರ ಸೇವೆಯನ್ನು ಕಾಪಾಡುವುದರಲ್ಲಿ ಯಾವುದೇ ಚ್ಯುತಿಯಿಲ್ಲ.

ನಗರದ ಎಲ್ಲಾ ವಲಯಗಳನ್ನು ಕಣ್ಮನ ಸೆಳೆಯುವ ವಿದ್ಯುತ್ ದೀಪಗಳಿಂದ ಅಲಂಕರಿಸಿರುವುದರಿಂದ ರಾತ್ರಿಯ ವೇಳೆಯಲ್ಲಿ ನಗರದ ಅಂದ ಇಮ್ಮಡಿಸುತ್ತದೆ. ಇನ್ನು ಸೇವಾಕ್ಷೇತ್ರಗಳಾದ ಅಂಗಡಿ ಮುಂಗಟ್ಟು, ವಾಣಿಜ್ಯ ಸಂಕೀರ್ಣ, ಸರ್ಕಾರಿ ಅಥವ ಸರ್ಕಾರಿಯೇತರ ಕಛೇರಿ, ರೈಲು, ಬಸ್ ಹಾಗು ವಿಮಾನ ನಿಲ್ದಾಣ, ಆಸ್ಪತ್ರೆ, ಚಲನಚಿತ್ರ ಮಂದಿರಗಳು ಮುಂತಾಗಿ ಎಲ್ಲಿ ನೋಡಿದರೂ ಅಧಿಕೃತವಾಗಿ ಹೆಂಗಳೆಯರು ರಾರಾಜಿಸುತ್ತಿರುತ್ತಾರೆ. ಅವರ ಹಸನ್ಮುಖತೆ, ಗ್ರಾಹಕರನ್ನು ಮಾತನಾಡಿಸುವ ವೈಖರಿ, ಗ್ರಾಹಕರು ಖರೀದಿಸಲಿ ಬಿಡಲಿ ಅವರ ನಗುವೆಂದೂ ವದನದಿಂದ ಮಾಸುವುದಿಲ್ಲ.

ಚೀನೀ ನಾರಿಯರ ಧಿರಿಸಿನ ಬಗೆಯಂತೂ ಕಣ್ಸೆಳೆಯುವಂಥದ್ದು. ಅಜಾನುಬಾಹುಗಳಲ್ಲದ, ಸಾಮಾನ್ಯ ಎತ್ತರವಿರುವ ಮತ್ತು ಸಪೂರ ದೇಹವನ್ನು ಹೊಂದಿದ್ದು ಯಾವುದೇ ಶೈಲಿಯ ವಸ್ತ್ರ ಅವರಿಗೆ ಬಲು ಚೆನ್ನಾಗಿ ಶೋಭಿಸುತ್ತದೆ.

ಮಕ್ಕಳಂತೂ ತಮ್ಮ ಪುಟ್ಟ ಪುಟ್ಟ ಕಂಗಳೊಂದಿಗೆ ಥೇಟ್ ಬೊಂಬೆಗಳೇ ಎನಿಸುವರು... ಗಂಡಸರಲ್ಲಿ ನಾಜೂಕುತನ ಅಷ್ಟೇನು ಎದ್ದು ಕಾಣುವುದಿಲ್ಲ, ಹೆಂಗಸರಿಗೆ ಹೋಲಿಸಿದರೆ ತೀರಾ ಕಳಪೆ. ಆಹಾರ ಸೇವನೆಯ ವಿಚಾರದಲ್ಲಿ ಗಂಡಸರು ಸಾಮಾನ್ಯವಾಗಿ ಮಾಂಸಪ್ರಿಯರು, ಮೂರು ಹೊತ್ತು ಯಾವುದಾದರೂ ಮಾಂಸವಿರಲೇಬೇಕು. ಹೆಂಗಳೆಯರು ಮಾಂಸವನ್ನು ಮಿತವಾಗಿ ಸೇವಿಸಿ ತರಕಾರಿ ಹಾಗು ಸೊಪ್ಪನ್ನು ಹೆಚ್ಚಾಗಿ ಬಳಸುತ್ತಾರೆ.

ಇನ್ನು ಚೀನಿಯರ ಊಟದ ಶೈಲಿಯೆಂದರೆ, ಮಾಡಿದ್ದೆಲ್ಲಾ ಅಡುಗೆಯನ್ನು ಮೇಜಿನ ಮಧ್ಯದಲ್ಲಿರಿಸಿ ಅದರ ಸುತ್ತಾ ಎಲ್ಲರೂ ಕುಳಿತು ಒಂದು ಕೈಯಲ್ಲಿ ಸ್ವಲ್ಪ ಪ್ರಮಾಣದ ಅನ್ನವಿರುವ ಪಿಂಗಾಣಿಯ ಬಟ್ಟಲನ್ನು ಮತ್ತೊಂದು ಕೈಯಲ್ಲಿ ಎರಡು ಕಡ್ಡಿಗಳನ್ನು ಹಿಡಿದರೆ ಕವಳ ಕತ್ತರಿಸಲು ಸಿದ್ಧ ಎಂದರ್ಥ! ಆ ಎರಡು ಕಡ್ಡಿಗಳಿಂದಲೇ ತಮಗೆ ಬೇಕಾದ ಆಹಾರ ಪದಾರ್ಥಗಳನ್ನು ಎಡಗೈನಲ್ಲಿರುವ ಬಟ್ಟಲಿಗೆ ಬಡಿಸಿಕೊಳ್ಳಲು ಮತ್ತು ತಿನ್ನುವುದಕ್ಕೂ ಉಪಯೋಗಿಸುತ್ತಾರೆ. ಊಟದಲ್ಲಿ ಅನ್ನದ

ಪ್ರಮಾಣ ತೀರಾ ಕಡಿಮೆ, ನಮ್ಮ ಪಲ್ಯದ ಹಾಗೆ. ಮಾಂಸ, ತರಕಾರಿ ಮತ್ತು ಸೊಪ್ಪಿನ ಜೊತೆಗೆ ಅನ್ನವನ್ನು ನೆಂಚಿಕೊಂಡು ತಿನ್ನುತ್ತಾರೆ. ತಯಾರಿಸಿದ ಅಡುಗೆಯನ್ನು ಬಡಿಸುವ ರೀತಿಯೆಂದರೆ ಮಾಂಸಾಹಾರಕ್ಕೆ ಉಪಯೋಗಿಸುವ ಸಕಲ ಜೀವಿಜಂತುಗಳನ್ನು ಅದರ ಮೂಲ ಚಹರೆಗೆ ಧಕ್ಕೆ ಬರದಂತೆ ಜೋಪಾನವಾಗಿ ಬೇಯಿಸಿ ಇಡಿಯಾಗೇ ಬಡಿಸುತ್ತಾರೆ, ತಿನ್ನುವ ಶೈಲಿಯಂತೂ ಸಶಬ್ದದಿಂದ ಕೂಡಿದ್ದು ಮುಜುಗರ ಉಂಟು ಮಾಡುತ್ತದೆ. ಎರಡು ಕಡ್ಡಿಗಳ ಸಹಾಯದಿಂದ ಊಟ ಮಾಡುವ ಅವರುಗಳು ಎಂಜಲಿನ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ಊಟಕ್ಕೆ ಸಾಮಾನ್ಯವಾಗಿ ಎರಡು ತರಹದ ಮಾಂಸ, ಎರಡು ತರಕಾರಿ, ಒಂದು ಸೊಪ್ಪು ಹಾಗು ಯವುದಾದರು ಸೂಪ್ ಇರುತ್ತದೆ, ಸೂಪ್ ಎಂದರೆ ಒಂದು ತಪ್ಪಲೆ ನೀರಿಗೆ ಕೊಂಚ ಎಣ್ಣೆ, ಒಂದು ಮೊಟ್ಟೆ, ಒಂದು ಟೊಮೇಟೊ ಕಿವುಚಿ ಹಾಕಿ ಸ್ವಲ್ಪ ಉಪ್ಪು ಬೆರೆಸಿ ಕೊತ ಕೊತ ಕುದಿಸಿದರೆ ತಯಾರಾಯಿತು ಸೂಪ್! ಪೃಥ್ವಿಯಲ್ಲಿರುವ ಎಲ್ಲಾ ಜೀವ ಜಂತುಗಳನ್ನು ಧಾರಾಳವಾಗಿ ಸೇವಿಸುವ ಅವರು ತಮ್ಮ ಆ ಪರಿಪಾಠವನ್ನು ಸಮಜಾಯಿಸಿಕೊಳ್ಳಲು ಅವರಿಗೆ ಒಂದಲ್ಲಾ ಒಂದು ನೆಪ ಇದ್ದೇ ಇರುತ್ತದೆ. ಎಲ್ಲಾ ನೆಪಗಳು ರುಚಿಕರ ಹಾಗೂ ಆರೋಗ್ಯಕ್ಕೆ ಪೂರಕವಂತೆ!

ಶಿಯಾಮನ್, ಸಮುದ್ರ ತೀರದಲ್ಲಿರುವ, ಸಣ್ಣ ಪುಟ್ಟ ದ್ವೀಪಗಳನ್ನು ಹೊಂದಿದ, ಕಲುಷಿತರಹಿತವಾದ ವಾತಾವರಣವನ್ನು ಉಳಿಸಿಕೊಂಡಿರುವ, ಪ್ರವಾಸಿಗರನ್ನು ಹೆಚ್ಚು ಆಕರ್ಷಿಸಲು ಉತ್ತಮ ಹಾಗೂ ವೈವಿಧ್ಯಮಯವಾದ ತಾಜಾ ಸಮುದ್ರಾಹಾರದ ಭಂಡಾರವನ್ನು ತನ್ನ ತೆಕ್ಕೆಯೊಳಗಿಟ್ಟುಕೊಂಡ ಅತ್ಯಂತ ಸುಂದರ ನಗರ! ಪ್ರತೀವರ್ಷ ಈ ನಗರವು ದೇಶದ ಪ್ರವಾಸಿಗರನ್ನು ಆಕರ್ಷಿಸುವ ಪ್ರಮುಖ ೧೦ ನಗರಗಳಲ್ಲಿ ಒಂದಾಗಿದ್ದು ೨೦೧೧ ಇಸವಿಯಲ್ಲಿ ಮೊದಲನೆ ಸ್ಥಾನ ಗಳಿಸಿದ ಹೆಮ್ಮೆ ಇದೆ ಈ ನಗರಕ್ಕೆ. ಶಿಯಾಮನ್ ನಗರವು ಫ಼ುಜಿಯಾನ್ ಎನ್ನುವ ರಾಜ್ಯಕ್ಕೆ ಸೇರಿದ್ದು ಇಸವಿ ೨೦೧೦ ರವರೆಗೆ ಕೇಂದ್ರ ಸರ್ಕಾರದಿಂದ ಕಡೆಗಣಿಸಲ್ಪಟ್ಟ ರಾಜ್ಯವಾಗಲು ಮುಖ್ಯ ಕಾರಣ ಇಲ್ಲಿನ ಬಹುಪಾಲು ನಾಗರಿಕರು ಚೀನಾದ ಆಂತರಿಕ ಜಗಳದ ವೇಳೆಯಲ್ಲಿ ತೈವಾನ್‌ಗೆ ಪಲಾಯನಗೈದಿದ್ದದ್ದು. ಹಾಗಾಗಿ ಇಲ್ಲಿ ಯಾವುದೇ ಉನ್ನತ ಮಟ್ಟದ ಅಭಿವೃದ್ಧಿ ಯೋಜನೆಗಳನ್ನು ಹಮ್ಮಿಕೊಡಿರಲಿಲ್ಲ. ೨೦೧೧ ರ ಈಚೆಗೆ ಈ ರಾಜ್ಯದವರು ಕೇಂದ್ರದಲ್ಲಿ ಅಧಿಕಾರ ವಹಿಸಿಕೊಂಡ ಮೇಲೆ ಇಲ್ಲಿನ ವಾತಾವರಣವು ಬದಲಾಗಿ ನಗರದಲ್ಲಿ ಮೇಲ್ಸೇತುವೆ ಸಾರಿಗೆ, ಮೆಟ್ರೊ ಸಾರಿಗೆ ಮುಂತಾದ ಯೋಜನೆಗಳು ಆರಂಭವಾಗಿದೆ. ಈ ರಾಜ್ಯದಲ್ಲಿ ತೈವಾನ್ ಪ್ರಜೆಗಳ ಬಂಡವಾಳ ಹೂಡಿಕೆ ಹೆಚ್ಚಿದ್ದು ಲೆಕ್ಕವಿಲ್ಲದಷ್ಟು ಕಾರ್ಖಾನೆ, ಆಸ್ಪತ್ರೆ, ದೇವಸ್ಥಾನಗಳು

ನಿರ್ಮಾಣಗೊಂಡಿವೆ. ತೈವಾನಿಗಳು ಪ್ರತೀವರ್ಷ ಈ ರಾಜ್ಯಕ್ಕೆ ಭೇಟಿ ನೀಡಿ ತಮ್ಮ ವಂಶಸ್ಥರನ್ನು ಹಾಗು ಪರಿಚಯಸ್ಥರನ್ನು ಕಂಡು ಕೆಲ ದಿನಗಳು ಒಟ್ಟಿಗೆ ಇದ್ದು ಹಳೆಯದನ್ನೆಲ್ಲಾ ಮೆಲುಕು ಹಾಕುವುದು ಸರ್ವೇ ಸಾಮಾನ್ಯ.

ನಾನು ವಾಸಿಸುತ್ತಿದ್ದದ್ದು ಇಲ್ಲಿನ ನಾಲ್ಕುನೂರು ಚದರ ಕಿಲೋಮೀಟರ್ ವಿಸ್ತೀರ್ಣದ ದ್ವೀಪದಲ್ಲಿ. ಕೆಲಸ ಮಾಡುತ್ತಿದ್ದ ಕಾರ್ಖಾನೆಯ ದೂರವನ್ನು ರಸ್ತೆಯ ಮೂಲಕ ಕ್ರಮಿಸಲು ಮುಕ್ಕಾಲು ತಾಸು ಸಾಕು. ದ್ವೀಪದಿಂದ ಮುಖ್ಯ ಭೂಮಿಗೆ ತಲುಪಲು ಸಾಗರದ ಮೇಲೆ ಐದು ಸೇತುವೆಗಳನ್ನು ಹಾಗೂ ಸಮುದ್ರದೊಳಗೆ ಒಂದು ಸುರಂಗ ಮಾರ್ಗವನ್ನು ನಿರ್ಮಿಸಿದ್ದಾರೆ. ನಿವೃತ್ತರ ಸ್ವರ್ಗ ಎನಿಸಿದ ಈ ನಗರದಲ್ಲಿ ಪಾಶ್ಚಿಮಾತ್ಯರು ಅಧಿಕ ಸಂಖ್ಯೆಯಲ್ಲಿ ನೆಲೆಸಿದ್ದಾರೆ. ನಾನಿದ್ದ ದ್ವೀಪದ ಸಮೀಪವೇ ಗೂಲಾಂಗ್ಯು ಎಂಬ ಮತ್ತೊಂದು ಸಣ್ಣ ದ್ವೀಪವಿದ್ದು ಇಡೀ ನಗರದ ಕೇಂದ್ರ ಆಕರ್ಷಣೆಯಾಗಿದೆ. ಪಾಶ್ಚಿಮಾತ್ಯ ಶೈಲಿಯ ಪ್ರಾಚೀನ ಕಟ್ಟಡಗಳನ್ನು ಸಕಾಲಕ್ಕೆ ಪುನಃರುಜ್ಜೀವನಗೊಳಿಸಿ ಹೊಚ್ಚ ಹೊಸದರಂತೆ ಕಾಪಾಡಿಕೊಂಡು ಬರುತ್ತಿರುವುದರಿಂದ ಅವುಗಳನ್ನು ವೀಕ್ಷಿಸುವವರನ್ನು ಗತಕಾಲಕ್ಕೆ ಸೆಳೆದೊಯ್ಯುತ್ತದೆ. ಪ್ರವಾಸಿಗರನ್ನು ಹೆಚ್ಚು ಆಕರ್ಷಿಸಲು ಇಡೀ ದ್ವೀಪದಲ್ಲಿ ಕರಕುಶಲಿಗರು, ಸಂಗೀತಗಾರರು, ಪ್ರಾಂತೀಯ ಆಹಾರೋತ್ಪನ್ನ ತಯಾರಿಕೆಗಾರರು, ತಾಜಾ ಹಾಗೂ ಸಂಸ್ಕರಿಸಿದ ಸಮುದ್ರ ಉತ್ಪನ್ನಗಳ ಮಾರಾಟಗಾರರು, ಶಿಲ್ಪಿಗಳು ಮುಂತಾದವರಿಂದ ಜನನಿಭಿಡೆಯಾಗಿ ವರ್ಷವಿಡೀ ಹಬ್ಬದ ವಾತಾವರಣ ನಿರ್ಮಾಣವಾಗಿದೆ.

ಒಂಟಿತನ ಕಳೆಯುವುದಕ್ಕಿದ್ದ ಮಾಧ್ಯಮವಾದ ಸಿನೆಮಾ ವೀಕ್ಷಣೆ, ನಾಟಕ, ಚಲನಚಿತ್ರ ಗೀತೆ, ಸುಗಮ ಸಂಗೀತ, ಹರಿಕಥೆಯ ಆಲಿಕೆ ಇತ್ತೀಚೆಗೆ ಯಾಕೋ ಸಾಕೆನಿಸಿ ಬೇರೇನು? ಎಂತಾದಾಗ ಆಸರೆಯಾಗಿದ್ದು ಬನ್ನಂಜೆ ಗೋವಿಂದಾಚಾರ್ಯರ ಪ್ರವಚನ ಮಾಲಿಕೆ. ಮೊದಲನೇ ಸಲಕ್ಕೆ ಪ್ರವಚನದಲ್ಲಿ ಅವರು ಸವಿವರವಾಗಿ ವರ್ಣಿಸುವ ನಿರರ್ಗಳತೆಯ ಶೈಲಿಗೆ ಮಾರು ಹೋಗಿ ಅದೇ ತದನಂತರದ ನಿತ್ಯ ಪರಿಪಾಠವಾಗಿ ಮುಂದುವರೆಯಿತು.

ಶ್ನೈಡರ್ ಎಲೆಕ್ಟ್ರಿಕ್ ಕಾರ್ಖಾನೆಯ ವಹಿವಾಟೇನು ನನಗೆ ಹೊಸದೆನಿಸಲಿಲ್ಲ, ಕಾರಣ ಫಿಲಿಪೀನ್ಸ್ ನಲ್ಲಿನ ಕಾರ್ಖಾನೆಯಲ್ಲಿನ ಅನುಭವ ಅಖಂಡ ಕಾರ್ಖಾನೆಯ ಸಮೂಹಗಳ ರೀತಿ ನೀತಿಯನ್ನು ಮನದಟ್ಟು ಮಾಡಿಕೊಟ್ಟಿತ್ತು. ಇಲ್ಲಿದ್ದ ಎರಡು ಸವಾಲೆಂದರೆ, ಭಾರತ ಮತ್ತು ಫಿಲಿಪೀನ್ಸ್ ನಲ್ಲಿನ ಕಾರ್ಖಾನೆಗಳೊಡನೆ ಚೀನಾದಲ್ಲಿದ್ದ ನಾವು ಎದುರಿಸಬೇಕಿದ್ದ ವ್ಯವಹಾರಿಕಾ ಪೈಪೋಟಿ ಹಾಗೂ

ಆಂತರಿಕವಾಗಿ ನಮ್ಮ ಕಾರ್ಖಾನೆಯ ಮುಖ್ಯಸ್ಥರಾಗಿದ್ದ ಫ್ರೆಂಚ್ ಅಧಿಕಾರಿ. ಮೂಲತಃ ಅಮೇರಿಕಾದ ಕಂಪೆನಿಯಾಗಿದ್ದ ಎ.ಪಿ.ಸಿ ಯನ್ನು ಶ್ನೈಡರ್ ಎಲೆಕ್ಟ್ರಿಕ್ ನಾಲ್ಕು ವರ್ಷಗಳ ಹಿಂದೆ ಕಬಳಿಸಿತ್ತು. ಆದರೆ ಎ.ಪಿ.ಸಿ ಯ ಗಟ್ಟಿಮುಟ್ಟಾದ ಹಿರಿಯ ಅಧಿಕಾರಿಗಳು ಬಡಪೆಟ್ಟಿಗೆ ಶ್ನೈಡರ್‌ನ ಸಂಪೂರ್ಣ ಹಿಡಿತಕ್ಕೆ ಸಿಕ್ಕಿರಲಿಲ್ಲ. ಹಾಗಾಗಿ ಶ್ನೈಡರ್‌ನ ಹಿರಿಯ ಸಿಬ್ಬಂದಿ ಪಡೆ ಆಡಳಿತವನ್ನು ತಮ್ಮ ತೆಕ್ಕೆಯೊಳಕ್ಕೆಳೆದುಕೊಳ್ಳಲು ಸೂಕ್ತವಾದ ಅವಕಾಶಕ್ಕೆ ಹಾಗೂ ಸಮಯಕ್ಕೆ ಬಕ ಪಕ್ಷಿಯಂತೆ ಹೊಂಚು ಹಾಕಿತ್ತು. ಶ್ನೈಡರ್ ಸಿಬ್ಬಂದಿಯವರು ನಾವು ಎಡವುದನ್ನೆ ಎಡಬಿಡದೆ ಗಮನಿಸುವುದಲ್ಲದೇ ಎಡವಲು ಬೇಕಾದಷ್ಟು ಅವಕಾಶಗಳನ್ನು ಕಲ್ಪಿಸುತ್ತಲೇ ಇತ್ತು! ಈ ಪರಿಸ್ಥಿತಿಯು ನಮ್ಮನ್ನು ಅಡಕೆ ಕತ್ತರಿಯಲ್ಲಿನ ಅಡಕೆಯಂತಾಗಿಸಿ ಬಲು ಜೋಪಾನವಾಗಿ ಸಂದರ್ಭವನ್ನು ನಿಭಾಯಿಸುವಂತೆ ಪ್ರೇರೇಪಿಸಿತ್ತು. ವರ್ಷವಾಗುತ್ತಿದ್ದ ಹಾಗೆ, ಎ.ಪಿ.ಸಿ. ಯ ಹಿರಿಯ ಅಧಿಕಾರಿಗಳು ನಮ್ಮ ಕಾರ್ಖಾನೆಯ ಮುಖ್ಯಸ್ಥರಾಗಿದ್ದ ಫ್ರೆಂಚ್ ಅಧಿಕಾರಿಯನ್ನು ಹೊರದೂಡುವಲ್ಲಿ ಯಶಸ್ವಿಯಾಗಿ ನನ್ನ ಸಹೋದ್ಯೋಗಿಯಾದ ನಾಗ್ ಅವರನ್ನು ಸಂಸ್ಥೆಯ ಮುಖ್ಯಾಧಿಕಾರಿಯನ್ನಾಗಿಸಿದರು. ಅಲ್ಲಿಂದೀಚೆಗೆ ಸಂಸ್ಥೆಯು ಸಂಪೂರ್ಣ ಎ.ಪಿ.ಸಿ. ಮಯವಾಗಿ ಸವಾಲಿನಲ್ಲಿನ ಅರ್ಧ ಹೊರೆಯನ್ನು ಇಳಿಸಿದಂತಾಗಿತ್ತು. ತರುವಾಯ ಸಂಸ್ಥೆಗೆ ಒಡ್ಡಿದ್ದ ಪ್ರಮುಖ ಗುರಿಯೆಂದರೆ  ಉತ್ಪಾದನೆಯಲ್ಲಿನ ಪ್ರಗತಿ. ಕಾರಣ, ಅಲ್ಲಿಯ ತನಕ ಚೀನಾದಲ್ಲಿನ ಮಾರುಕಟ್ಟೆಯ ಬೇಡಿಕೆಗಳನ್ನು ಪೂರೈಸಲು ಸರಕುಗಳನ್ನು ಭಾರತ ಅಥವಾ ಫಿಲಿಪೀನ್ಸ್ ನ ಕಾರ್ಖಾನೆಗಳಿಂದ ಆಮದು ಮಾಡಿಕೊಳ್ಳಲಾಗುತ್ತಿತ್ತು. ಚೀನಾ ಸರ್ಕಾರದ ಹೊಸ ಆಮದು ನೀತಿಯಿಂದ ಸರಕುಗಳ ದರ ಅಟ್ಟಕ್ಕೇರಿ ಚೀನಾದಲ್ಲಿನ ಕಾರ್ಖಾನೆಯಲ್ಲೇ ಉತ್ಪಾದಿಸಲು ಹಿರಿಯ ಸಿಬ್ಬಂದಿ ತೆಗೆದುಕೊಂಡಿದ್ದ ನಿರ್ಧಾರ. ಉತ್ಪಾದನೆಯ ಮಟ್ಟ ಕ್ರಮೇಣ ಏರುತ್ತಿದ್ದ ಹಾಗೇ ಸಹೋದ್ಯೋಗಿ ನಾಗ್‌ರವರು ಸಂಸ್ಥೆಯಲ್ಲಿನ ಪ್ರಸ್ತುತ ಪರಿಸ್ಥಿತಿಯನ್ನು ಅವಲೋಕಿಸಿ ಉತ್ಪಾದನಾ ವಿಭಾಗಕ್ಕೆ ಯಾರಾದರೂ ಅನುಭವಸ್ಥರನ್ನು ತರಲು ಹಿರಿಯ ಅಧಿಕಾರಿಗಳಿಂದ ಒಪ್ಪಿಗೆ ಪಡೆದು ಕಾರ್ಖಾನೆಯ ಮಾನವ ಸಂಪನ್ಮೂಲ ವಿಭಾಗದ ಮೂಲಕ ಹುಡುಕಾಟ ನಡೆಸಿದ್ದರು. ಜೊತೆಗೆ ನನಗೂ ತಿಳಿದವರಲ್ಲಿ ಯಾರನ್ನಾದರು ಶಿಫಾರಸು ಮಾಡಲು ಉತ್ತೇಜಿಸಿದರು. ಆಗ ನೆನಪಾದದ್ದು ಕಿರ್ಲೋಸ್ಕರ್ ಕಾರ್ಖಾನೆಯ ಕಂಪ್ಯೂಟರ್ ವಿಭಾಗದಲ್ಲಿನ ನನ್ನ ಮಾಜಿ ಅಧಿಕಾರಿ ರಮೇಶ್ ಮುತ್ತೂರ್‌ರವರು.

ಎರಡೂ ಕಡೆ ಅಳೆದೂ ಸುರಿದೂ ನಿರ್ಣಯಿಸಿ ಮುತ್ತೂರ್‌ರವರು ನಮ್ಮನ್ನು ಸೇರಲು ಆರು ತಿಂಗಳಾಯಿತು. ಎರಡು ವರ್ಷಗಳಿಂದ ನಾನು ಹಾಗೂ ಸಹೋದ್ಯೋಗಿ

ನಾಗ್‌ರವರು, ನಮಗೆಂದೇ ಪ್ರತ್ಯೇಕ ಮನೆಗಳಿದ್ದರೂ ಒಟ್ಟಿಗೆ ಒಂದೇ ಮನೆಯಲ್ಲಿ ವಾಸಿಸುತ್ತಿದ್ದೆವು. ನನ್ನ ಅಥವ ಅವರ ಸಂಸಾರ ಚೀನಾಕ್ಕೆ ಬಂದಾಗ ಮಾತ್ರ ನಾವು ಬೇರೆಯಾಗಿ ವಾಸಿಸುತ್ತಿದ್ದದ್ದು. ಒಟ್ಟಿಗಿರುವಾಗ ಸಮಯದ ಮುಕ್ಕಾಲಂಶ ವೇಳೆಯಲ್ಲಿ ಕಾರ್ಖಾನೆಯ ಬಗ್ಗೆಯೇ ನಮ್ಮ ಚರ್ಚೆ. ಸೋಮವಾರದಿಂದ ಶುಕ್ರವಾರದವರೆಗೆ ಸಂಪೂರ್ಣ ಕರ್ತವ್ಯವೆಂಬ ಸಾಗರದಲ್ಲಿ ಮುಳುಗಿರುತ್ತಿದ್ದೆವು! ಸಾಮಾನ್ಯವಾಗಿ ಶುಕ್ರವಾರ ಸಂಜೆ ಮನೆಗೆ ಹಿಂದಿರುಗುವಾಗ ವಾರಕ್ಕೆ ಬೇಕಾಗುವಷ್ಟು ತರಕಾರಿ, ಹಣ್ಣು, ಹಾಲು ಇತರೆ ಅಡುಗೆ ಮನೆಯ ಪದಾರ್ಥಗಳಲ್ಲದೆ ಶನಿವಾರ ಮತ್ತು ಭಾನುವಾರಕ್ಕೆಂದು ಕೋಳಿ, ಮೀನು ಹಾಗು ಯಾವುದಾದರೊಂದು ಸಾಗರೋತ್ಪನ್ನ ಕೊಂಡು ತೆರಳಿದರೆ ವಾರಾಂತ್ಯವನ್ನು ಬಾಡೂಟದ ಸಂಭ್ರಮದೊಂದಿಗೆ ಮನೆಯಲ್ಲಿ ಹೋಮ್ ಥಿಯೇಟರ್ ವ್ಯವಸ್ಥೆಯನ್ನು ಅಳವಡಿಸಿಕೊಂಡಿದ್ದರಿಂದ ಚಲನಚಿತ್ರ ವೀಕ್ಷಣೆ! ಸಾಮಾನ್ಯವಾಗಿ ನಾನು ಸಸ್ಯಾಹಾರ ಮತ್ತು ನಾಗ್‌ರವರು ಮಾಂಸಾಹಾರದ ಅಡುಗೆಯನ್ನು ತಯಾರಿಸುತ್ತಿದ್ದೆವು. ಸಂದರ್ಭಕ್ಕನುಸಾರ ಕೆಲವೊಮ್ಮೆ ಸನಿಹದ ಪ್ರೇಕ್ಷಣಾಸ್ಥಳಗಳಿಗೆ ಸಹೋದ್ಯೋಗಿಗಳೊಡನೆ ಭೇಟಿ ನೀಡುತ್ತಿದ್ದೆವು.

ಶಿಯಾಮನ್ ನಗರದಲ್ಲಿನ ನನ್ನ ವಾಸಕ್ಕೆ ವರ್ಷವಾಗುತ್ತಿದ್ದಂತೆ ಅಪ್ಪ, ಅಮ್ಮನವರು ಮಡದಿ ಗಾಯತ್ರಿಯೊಂದಿಗೆ ಬಂದು ನನ್ನ ಜೊತೆಗೆ ಎರಡು ತಿಂಗಳು ನೆಲೆಸಿದ್ದರು. ಗಾಯತ್ರಿಗೆ ಆಗಲೇ ಚೀನಾದ ಯಾತ್ರೆ ಸಹಜವಾಗಿತ್ತು. ಅಪ್ಪ, ಅಮ್ಮನವರ ಹರುಷಕ್ಕೆ ಎಣೆಯೇ ಇರಲಿಲ್ಲ. ಹವಾಮಾನದ ಪರಿಣಾಮವೋ ಏನೋ, ಅವರು ಆರೋಗ್ಯದಿಂದಿದ್ದು ಬಹಳ ಲವಲವಿಕೆಯಿಂದ ಅಲ್ಲಿನ ಜೀವನವನ್ನು ಆನಂದಿಸಿದ್ದರು. ನಾಗರಿಕರಿಗೆ ಅವಶ್ಯವಿರುವ ಪ್ರಾಥಮಿಕ ಬೇಡಿಕೆಗಳ ಕುಂದು ಕೊರತೆಗಳನ್ನು ನಿತ್ಯ ಎದುರಿಸುತ್ತಿರುವ ಭಾರತದಲ್ಲಿನ ಪರಿಸ್ಥಿತಿಯನ್ನು ಸದಾ ಚೀನಾಕ್ಕೆ ಹೋಲಿಸಿ ನಮ್ಮಲ್ಲೂ ಹೀಗೆ ಇರಬಾರದೇ ಎಂದು ಮರುಗುತ್ತಿದ್ದರು. ಒಟ್ಟಿಗೆ ಸಮೀಪದ ಕೆಲವು ಪ್ರೇಕ್ಷಣೀಯ ಸ್ಥಳಗಳನ್ನು ಸುತ್ತಿದ್ದೆವು. ತಂದೆಯವರು ಬೆಳವಾಡಿಯಲ್ಲಿರುವಾಗ ವೈದ್ಯರ ಆದೇಶದಂತೆ ಮುಂಜಾನೆ ಹಾಗೂ ಮುಸ್ಸಂಜೆಯ ಕಾಲ್ನಡಿಗೆಯನ್ನು ಪಾಲಿಸದವರು ಇಲ್ಲಿರುವ ತನಕ ಪ್ರತಿನಿತ್ಯ ಉತ್ಸುಕತೆಯಿಂದ ಪಾಲಿಸುತ್ತಿದ್ದರು. ಮನೆಯಿಂದ ದಿನಕ್ಕೊಂದು ದಿಕ್ಕಿಗೆ ಸಾಧ್ಯವಾದಷ್ಟು ದೂರ ಅಮ್ಮನವರೊಂದಿಗೆ ಕ್ರಮಿಸಿ ಹಿಂದಿರುಗುತ್ತಿದ್ದರು.

ಇತ್ತೀಚೆಗೆ ಕಾರ್ಖಾನೆಯ ವ್ಯವಹಾರದ ಸಲುವಾಗಿ ಭಾರತದಲ್ಲಿನ ಮೈಕ್ರೊನೋವ ಇಂಪೆಕ್ಸ್ ಎಂಬ ಸಂಸ್ಥೆಯೊಂದಿಗೆ ವಹಿವಾಟು ಆರಂಭವಾಗಿ ಅಲ್ಲಿ ಸೇವೆ ಸಲ್ಲಿಸುತ್ತಿರುವ ಶ್ರೀಯುತ ರಘುನಾಥ್ ಎಂಬುವರೊಡನಿದ್ದ ವ್ಯಾವಹಾರಿಕ

ಪರಿಚಯ ಕ್ರಮೇಣ ಅವರೊಬ್ಬ ಹಿತೈಷಿಯಾಗಿ ಮಾರ್ಪಡಲು ಬಹಳ ಕಾಲ ಹಿಡಿಯಲಿಲ್ಲ.

ರಮೇಶ್ ಮುತ್ತೂರ್‌ರವರ ಆಗಮನದ ದಿನಾಂಕ ನಿರ್ಧಾರವಾಗುತ್ತಿದ್ದಂತೆ ನಾಗ್‌ರವರೆಂದರು "ಮೋಹನ್, ಮುತ್ತೂರ್ ಮೊದಲನೇ ಬಾರಿಗೆ ತಮ್ಮ ಸಂಸಾರವನ್ನು ಬಿಟ್ಟು ಇಷ್ಟು ದೂರ ಬರುತ್ತಿರುವುದರಿಂದ ಅವರಿಗೆ ಒಂಟಿ ಜೀವನಕ್ಕೆ ಒಗ್ಗಲು ಸಮಯ ಹಿಡಿಯುವುದು, ನೀವು ಅವರಿಗೆ ಮುಂಚಿನಿಂದಲೂ ಪರಿಚಯವಿರುವುದರಿಂದ ಅವರ ಹತ್ತಿರ ಇದ್ದರೆ ಒಳಿತೆನಿಸುವುದು, ನನಗೆ ಒಂಟಿ ಜೀವನದ ಅಭ್ಯಾಸವಿರುವುದರಿಂದ ನನ್ನ ಬಗ್ಗೆ ಕಾಳಜಿ ಬೇಡ". ಹಾಗಾಗಿ ನಾನು ಬಾಡಿಗೆಗಿದ್ದ ಮನೆಗಳ ಸಮುಚ್ಚಯದಲ್ಲೇ ಮುತ್ತೂರ್‌ರವರಿಗೊಂದು ಮನೆ ನೋಡಿದ್ದೆವು. ನಂತರದ ಎರಡೂವರೆ ವರ್ಷಗಳ ನನ್ನ ಜೀವನ ಶೈಲಿಯು ಮುತ್ತೂರ್‌ರವರೊಂದಿಗಿನ ಒಡನಾಟದೊಂದಿಗೆ ಬದಲಾವಣೆ ಕಂಡಿತು. ಅಲ್ಲಿಯ ತನಕ ಕಾರ್ಖಾನೆ ಹಾಗೂ ಕರ್ತವ್ಯದಲ್ಲೇ ತಲ್ಲೀನನಾಗಿದ್ದವ ಈಗ ಅವುಗಳ ಜೊತೆ ಜೊತೆಗೆ ಜೀವನದ ಬೇರೆ ಆಯಾಮಗಳ ವಿಷಯಗಳ ಬಗ್ಗೆಯೂ ಚರ್ಚೆ ಮಾಡಲಾರಂಭಿಸಿದ್ದೆ. ಸಾಧ್ಯವಾದಾಗಲೆಲ್ಲಾ ನಾಗ್, ಮುತ್ತೂರ್ ಹಾಗೂ ನಾನು, ಮೂವರಲ್ಲಿ ಯಾರದಾದರೂ ಒಬ್ಬರ ಮನೆಯಲ್ಲಿ ವಾರಾಂತ್ಯಗಳಲ್ಲಿ ಒಟ್ಟಿಗೆ ಸೇರಿ ಅಡುಗೆ ಮಾಡಿಕೊಳ್ಳುವುದಲ್ಲದೆ ಊರನ್ನೂ ಸಹ ಸುತ್ತುತ್ತಿದ್ದೆವು.

ಶ್ನೈಡರ್ ಎಲೆಕ್ಟ್ರಿಕ್ ಕಾರ್ಖಾನೆಗೆ ಸೇರಿದಾಗಲಿನಿಂದ ವರ್ಷಕ್ಕೆ ಮೂರು ಬಾರಿ ಫಿಲಿಪೀನ್ಸ್ ಹಾಗು ವರ್ಷಕ್ಕೊಮ್ಮೆ ಅಮೇರಿಕಾಕ್ಕೆ ಕಾರ್ಖಾನೆಯ ಕಾರ್ಯ ನಿಮಿತ್ತ ಭೇಟಿ ಕೊಡಬೇಕಿತ್ತು. ಈ ಸದವಕಾಶದಿಂದ ಅಮೇರಿಕಾದಲ್ಲಿನ ನಗರಗಳಾದ ಲಾಸ್ ಏಂಜಲ್ಸ್ ಹಾಗೂ ಫ್ಲಾರಿಡಾಗಳನ್ನು ನೋಡುವಂತಾಯಿತು. ಸ್ವಭಾವತಃ ಸಿನೆಮಾ ಬಗ್ಗೆ ವಿಶೇಷ ಆಸಕ್ತಿ ಇದ್ದ ನನಗೆ ಹಾಲಿವುಡ್‌ನ ಯೂನಿವರ್ಸಲ್ ಸ್ಟುಡಿಯೋಸ್‌ಗೆ ಭೇಟಿ ನೀಡುವ ಅವಕಾಶ ದೊರಕಿದ್ದು ಬಹಳ ಹರುಷ ತಂದಿತ್ತು. ಇಡೀ ಒಂದು ದಿನ ಸಂಪೂರ್ಣ ಸ್ಟುಡಿಯೋದ ಆವರಣವನ್ನು ಸುತ್ತಿ ಅಲ್ಲಿನ ಸೆಟ್‌ಗಳ ಅದ್ಧೂರಿತನ, ಚಲನಚಿತ್ರಗಳಲ್ಲಿ ಬಳಸುವ ತಾಂತ್ರಿಕತೆಯನ್ನು ಪರಿಚಯಿಸುವ ಕಾರ್ಯಕ್ರಮಗಳು ಹಾಗೂ ಬೆಳ್ಳಿ ತೆರೆಯ ಮೇಲೆ ಬೃಹದಾಕಾರವಾಗಿ ತೋರಿಸುವ ಕುಬ್ಜ ಪ್ರತಿಕೃತಿಗಳನ್ನು ಕಣ್ಮನದೊಳಗೆ ಯಥಾಶಕ್ತಿ ತುಂಬಿಕೊಂಡ ತೃಪ್ತಿ ಇತ್ತು.

ಶಿಯಾಮನ್ ನಗರವಿದ್ದ ಫೂಜಿಯನ್ ರಾಜ್ಯದ ಜನಜೀವನದಲ್ಲಿ ಚಹಾ ಸೇವನೆ ಹಾಸುಹೊಕ್ಕಾಗಿ ತನ್ನದೇ ಆದ ವಿಶಿಷ್ಟತೆ ಹೊಂದಿದೆ. ಅತಿಥಿಗಳನ್ನು

ಬರಮಾಡಿಕೊಂಡು ಚಹಾ ತಯಾರಿಸಿ ನೀಡುವ ಪರಿಯಂತೂ ಬಲು ಕೌಶಲ್ಯದಿಂದ ಕೂಡಿದ್ದು ಗಮನಿಸುತ್ತಿದ್ದರೆ ಕಣ್ಮನಕ್ಕೆ ಚೇತೋಹಾರಿ ಎನಿಸುವುದು! ಚಹಾ ತಯಾರಿಸಲೆಂದೇ ಇರುವ ಮರದ ಅಥವಾ ದೃಢ ಪ್ಲಾಸ್ಟಿಕ್ ವಸ್ತುವಿನಿಂದ ತಯಾರಾದ ಮಣೆಯಂತಿರುವ ಪ್ರತ್ಯೇಕ ಸಾಧನವನ್ನು ಸಾಮಾನ್ಯವಾಗಿ ಅತಿಥಿಗಳು ಆಸೀನರಾಗಿರುವ ಪೀಠಗಳ ನಡುವೆ ಇರುವ ಮೇಜಿನ ಮೇಲೇ ಇರಿಸಿರುತ್ತಾರೆ. ಆ ಸಾಧನದ ಒಂದು ಮೂಲೆಯಲ್ಲಿ  ಇಂಡಕ್ಷನ್ ಹೀಟರ್  ಇದ್ದು ಅದರ ಮೇಲೆ ತುಸು ಎತ್ತರದಲ್ಲಿ  ಪಂಪ್  ಆಧಾರಿತ ನೀರಿನ ನಲ್ಲಿ ಇರುತ್ತದೆ. ನಲ್ಲಿಯ ಮತ್ತೊಂದು ತುದಿಯನ್ನು ನೀರಿನ ಡಬ್ಬದೊಳಕ್ಕೆ ಇಳಿ ಬಿಟ್ಟಿರುತ್ತಾರೆ. ಇಂಡಕ್ಷನ್ ಹೀಟರ್‌ನ ಮೇಲೆ ಉಕ್ಕಿನ ಕೈಪಾತ್ರೆಯನ್ನಿಟ್ಟು ಒತ್ತು ಗುಂಡಿಯನ್ನು ಒತ್ತಿ ನೀರು ತುಂಬಿದ ಮೇಲೆ  ಇಂಡಕ್ಷನ್ ಹೀಟರ್‌ನ ಸಹಾಯದಿಂದ ಕಾಯಿಸುತ್ತಾರೆ. ನೀರು ಕುದಿದ ಮೇಲೆ ಒಂದು ಗುಟುಕಿಗಷ್ಟೇ ಸಾಕಾಗುವಷ್ಟು ಚಹಾವನ್ನು ತನ್ನ ಒಡಲೊಳಗಿರಿಸಿಕೊಳ್ಳುವ ಗಾತ್ರದ ಪಿಂಗಾಣಿಯ ಆರು ಬಟ್ಟಲುಗಳನ್ನು, ಚಹಾ ಮತ್ತು ಬಿಸಿ ನೀರನ್ನು ಮಿಶ್ರಣ ಮಾಡುವ ಆರು ಪಿಂಗಾಣಿಯ ಪುಟ್ಟ ಬಟ್ಟಲಿಗೆ ಸುರಿಯುವಷ್ಟೇ ಪ್ರಮಾಣದ ನೀರನ್ನು ಅಡಕಗೊಳಿಸುವ ಗಾತ್ರದ ಮತ್ತೊಂದು ಪಿಂಗಾಣಿಯ ಪಾತ್ರೆ ಹಾಗೂ ತಯಾರಾದ ಚಹಾವನ್ನು ಪುಟ್ಟ ಬಟ್ಟಲಿಗೆ ಸುರಿಯಲು ಇರುವ ಇನ್ನೊಂದು ಪಿಂಗಾಣಿಯ ಪಾತ್ರೆಯನ್ನು ಮೊದಲಿಗೆ ಬಿಸಿ ನೀರಿನಿಂದ ತೊಳೆದು ನಂತರ ಚಹಾ ಮತ್ತು ನೀರನ್ನು ಮಿಶ್ರಣ ಮಾಡುವ ಪಾತ್ರೆಗೆ ಕೊಂಚ ಚಹಾದ ಹಸೀ ಅಥವಾ ಹುರಿದ ಎಲೆಗಳನ್ನು ಹಾಕಿ ಬಿಸಿ ನೀರು ಸುರಿದು ಸ್ವಲ್ಪ ಹೊತ್ತು ಮುಚ್ಚಳದಿಂದ ಮುಚ್ಚುತ್ತಾರೆ. ಕೆಲವು ಕ್ಷಣಗಳಾದ ಮೇಲೆ ಆ ನೀರನ್ನೆಲ್ಲಾ ಚೆಲ್ಲಿ ಮತ್ತೆ ಬಿಸಿ ನೀರು ಸುರಿದು ಮುಚ್ಚಳ ಮುಚ್ಚಿ, ಚಹದೆಲೆ ತನ್ನ ರಸವನ್ನು ಬಿಡಲು ಅನುವು ಮಾಡಿ ಕೆಲ ನಿಮಿಷಗಳಾದ ಮೇಲೆ ಚಹಾ ಬಡಿಸುವ ಪಾತ್ರೆಗೆ ಸುರಿದು ನಂತರ ಪುಟ್ಟ ಬಟ್ಟಲಿಗೆ ಚಹಾವನ್ನು ಬಗ್ಗಿಸಿ ಕುಡಿಯಲು ಕೊಡುವರು! ಖಾಲಿಯಾದ ಮಿಶ್ರಣದ ಪಾತ್ರೆಗೆ ಮತ್ತೆ ಬಿಸಿ ನೀರನ್ನು ತುಂಬಿ ಮುಚ್ಚಳ ಮುಚ್ಚಿ ಮಾತುಕತೆಗೆ ಇಳಿಯುತ್ತಾರೆ. ಒಂದು ಸಲ ಸುರಿದ ಚಹದೆಲೆಗೆ ಸಾಮಾನ್ಯವಾಗಿ ಏಳು ಸಲ ಬಿಸಿ ನೀರು ತುಂಬುವ ಕಾರ್ಯ ಪುನರಾವರ್ತನೆಯಾಗಿ ನಂತರ ಆ ಎಲೆಗಳನ್ನು ಬಿಸುಟು ಮತ್ತೆ ಹೊಸ ಚಹದೆಲೆಗಳೊಂದಿಗೆ ಚಹ ತಯಾರಿಕೆಯನ್ನು ಮುಂದುವರೆಸುತ್ತಾರೆ. ಅತಿಥಿಗಳ ಬಟ್ಟಲಿನ ಚಹ ಖಾಲಿಯಾಗುವುದೇ ತಡ ಮತ್ತೆ ತುಂಬಲು ಉತ್ಸುಕರಾಗಿರುತ್ತಾರೆ. ಕೆಲವೊಮ್ಮೆ ಅತಿಥಿಗಳು ಮಾತಿನಲ್ಲಿ ಮಗ್ನರಾಗಿ ಚಹ ಕುಡಿಯುವುದನ್ನು ಮರೆತರೆ ನೆನಪಿಸಿ ಬಲವಂತ ಮಾಡಿ ಸೇವಿಸುವಂತೆ ಮಾಡುತ್ತಾರೆ.

ಮನೆಗಳಲ್ಲಿನ ಚಹದ ಆತಿಥ್ಯದ ಪರಿ ಇಂತಾದರೆ, ಇನ್ನು ಚಹವನ್ನು ಮಾರಾಟ ಮಾಡುವ ಮಳಿಗೆಗಳಲ್ಲಂತೂ ಗ್ರಾಹಕರನ್ನು ಸೆಳೆಯಲು ಆತಿಥ್ಯದ ಸಂಭ್ರಮ ಪರಾಕಾಷ್ಠೆ ಮುಟ್ಟಿ ರೋಚಕವಾಗಿರುತ್ತದೆ! ಸಾಮಾನ್ಯವಾಗಿ ಹದಿ ಹರೆಯದ ಸಪೂರ ದೇಹದ ಸುಂದರ ಮೊಗದ ಹೆಣ್ಣುಗಳು ಕಣ್‌ಕೋರೈಸುವ ವೈಭವೋಪೇತ ರಾಜುಡುಗೆಗಳ ಮಾದರಿಯ ಧಿರಿಸನ್ನು ಧರಿಸಿ ಸರ್ವಾಲಂಕೃತರಾಗಿ ಧರೆಗೆ ಇಳಿದ ಗಂಧರ್ವ ಕನ್ಯೆಯರಂತೆ ಕಂಗೊಳಿಸುತ್ತಾ ಹಸನ್ಮುಖಿಗಳಾಗಿ ತಮ್ಮ ಮನಮೋಹಕ ಹಾವ, ಭಾವಗಳ ಲಯದೊಂದಿಗೆ ವಿವಿಧ ಶ್ರೇಣಿಯ ಚಹಾಗಳನ್ನು ತಯಾರಿಸುತ್ತಾ ಅವುಗಳ ಗುಣ ಮತ್ತು ಶ್ರೇಷ್ಠತೆಯ ಬಗ್ಗೆ ವಿಸ್ತಾರವಾಗಿ ವರ್ಣಿಸುತ್ತಾ ಗ್ರಾಹಕರಿಗೆ ಸೇವಿಸಲು ಸಮರ್ಪಿಸುವ ವೈಖರಿಗೆ ಯಾರೇ ಆಗಲಿ ತಲೆದಂಡವನ್ನು ತೆತ್ತು ಚಹವನ್ನು ಖರೀದಿಸಲೇಬೇಕೆಂಬ ಬಯಕೆಯನ್ನು ಮೂಡಿಸುತ್ತಾರೆ!

ನಾನು ಮತ್ತು ಮುತ್ತೂರ್‌ರವರು ಒಂದು ಶನಿವಾರ ಏಕದಿನದ ಪ್ರವಾಸಕ್ಕೆಂದು ನಗರಕ್ಕೆ ಹತ್ತಿರದ ಪ್ರೇಕ್ಷಣೀಯ ಸ್ಥಳದಲ್ಲಿದ್ದಾಗ ದೊಡ್ಡಬಳ್ಳಾಪುರದಿಂದ ದೂರವಾಣಿ ಕರೆ ಬಂತು. ಅನಾರೋಗ್ಯದಿಂದ ಹಾಸಿಗೆ ಹಿಡಿದು ಚಿಂತಾಜನಕ ಸ್ಥಿತಿಯಲ್ಲಿದ್ದ ದೊಡ್ಡಕ್ಕಯ್ಯನವರು ಹೊರಳದ ಬಾಯಲ್ಲಿ ನುಡಿದದ್ದು "ಮೋಹನ್, ನಾನು ಸಾಯುವ ಮುಂಚೆ ನಿನ್ನನ್ನೊಂದು ಸಲ ನೋಡಬೇಕೆಂಬಾಸೆ" ಎಂದು. ದಿಢೀರ್ ಎಂದು ಹೋಗಲಾಗುವುದಿಲ್ಲ, ಅವರ ಆಸೆ ಈಡೇರಿಸುವೆನೋ ಇಲ್ಲವೋ ಎಂಬ ಪೇಚಾಟದಲ್ಲಿ ಎರಡು ವಾರ ಕಳೆದಿತ್ತು. ಕಡೆಗೂ ಬಂತು ಅರಗಿಸಿಕೊಳ್ಳಲು ಪ್ರಯಾಸವೆನಿಸುವ ಕಟು ವಾಸ್ತವ ಸುದ್ದಿ, 'ದೊಡ್ಡಕ್ಕಯ್ಯ ಇನ್ನಿಲ್ಲ' ಮುತ್ತೂರ್ ರವರೊಡನೆ ಆಕೆಯ ಜೀವನ ವೃತ್ತಾಂತವನ್ನು ಅಶ್ರುತರ್ಪಣದೊಂದಿಗೆ ತೆರೆದು ಶ್ರದ್ಧಾಂಜಲಿ ಅರ್ಪಿಸಿದ್ದೆ.

ಏನೇ ಆಗಲಿ, ಬಿಡಲಿ ಜೀವನ ನಾಟಕ ಮುಂದುವರಿಯಲೇಬೇಕೆಂಬ ಕಟುಸತ್ಯದಂತೆ, ಆರು ತಿಂಗಳ ನಂತರ, ಇತ್ತ ಬೆಳವಾಡಿ ಮನೆಯಲ್ಲಿ ಕಟ್ಟ ಕಡೆಯ ತಮ್ಮನಾದ ಕಿರಣ್‌ನ ಮದುವೆಗೆ ಸಿದ್ಧತೆಗಳಾಗುತ್ತಿದ್ದವು. ಹೆಮ್ಮೆಯೆನಿಸುವಂತೆ, ತಮ್ಮಂದಿರು ಒಕ್ಕೊರಲಿನಿಂದ ಘೋಷಿಸಿದ್ದರು  ಅಣ್ಣಾ, ಇಲ್ಲಿಯ ತನಕ ನೀವು ಮನೆಗೋಸ್ಕರ ಮಾಡಿದ್ದು ಸಾಕು, ಈ ಮದುವೆಯ ಹೊರೆಯನ್ನು ನಾವೆಲ್ಲಾ ಹಂಚಿಕೊಂಡು ನಿಭಾಯಿಸುವೆವು  ಮರುಮಾತಿಲ್ಲದೇ ಸಂತೋಷದಿಂದ ಒಪ್ಪಿಗೆ ಸೂಚಿಸಿದ್ದೆ. ಆದರೂ ಮದುವೆಯನ್ನು ಸುಸೂತ್ರವಾಗಿ ಮುಗಿಸಲು ಮುಂದೆ ಕಾರಣಾಂತರದಿಂದ ಉದ್ಭವಿಸಿದ್ದ ಹಣಕಾಸಿನ ತೊಡಕನ್ನು ಸದ್ದಿಲ್ಲದೇ ನಿವಾರಿಸಿದ್ದೆ.

ಚೀನಾಕ್ಕೆ ಬಂದಾಗಲಿನಿಂದ ಸಹೋದ್ಯೋಗಿಗಳು ವಿವರಿಸುತ್ತಿದ್ದ ಒಂದು ಸ್ಥಳದ ಭೇಟಿಗೆ ಸರ್ವ ಪ್ರಯತ್ನ ಪಟ್ಟರೂ ಕೈಗೂಡಿರಲಿಲ್ಲ. ಆ ಸ್ಥಳದ ವಿವರಣೆಗಳನ್ನು ಆಲಿಸಿ, ಅಂತರ್ಜಾಲದಲ್ಲಿ ಹೆಚ್ಚಿನ ಮಾಹಿತಿ ಪಡೆದು, ಕಾಲ ಯಾವಾಗ ಕೂಡಿಬರುವುದೋ ಅಲ್ಲಿಗೆ ಹೋಗಲು ಎಂದು ಕಾಡುತ್ತಿದ್ದ ಕನಸು ನನಸಾಗಲು ಆರು ವರ್ಷಗಳು ಬೇಕಾದವು!

ಹರ್ಬಿನ್ ಎಂದು ಆ ಸ್ಥಳದ ಹೆಸರು. ಹೀಲಾಂಗ್ಜಿಯಾಂಗ್ ಎಂಬ ರಾಜ್ಯದ ರಾಜಧಾನಿಯಗಿದ್ದು, ಇತಿಹಾಸ ಕೆದಕಿದರೆ ಹನ್ನೊಂದರಿಂದ ಹದಿನೆಂಟನೆಯ ಶತಮಾನದ ತನಕ ಇದ್ದ ಜಿನ್ ಮತ್ತು ಚಿಂಗ್ ಎಂಬ ರಾಜಮನೆತನಗಳಿಗೆ ಜನ್ಮವಿತ್ತ ಪ್ರದೇಶವಿದು. ರಷ್ಯಾ ದೇಶಕ್ಕೆ ಹೊಂದಿಕೊಂಡಂತಿರುವ ಈ ರಾಜ್ಯಾದ್ಯಂತ ರಷ್ಯನ್ನರಲ್ಲದೇ ಅವರ ವಾಸ್ತುಶೈಲಿಯ ಕಟ್ಟಡಗಳು ಹೇರಳವಾಗಿದೆ. ಈ ನಗರದ ಮೂಲಕ ಹಾದು ಹೋಗುವ ಸಾಂಘ್ವಾ ಎಂಬ ನದಿಯು ಹೀಲಾಂಗ್ ಎನ್ನುವ ಮಹಾನದಿಯ ಅತಿದೊಡ್ಡ ಉಪನದಿ. ಸಾಂಘ್ವಾ ನದಿಯು ಹರ್ಬಿನ್ ನಗರದ ಮೂಲಕ ಹಾದುಹೋಗುವಾಗ ಅದರ ಆಳ ನಾಲ್ಕು ಮೀಟರ್ ಮೀರಿದರೆ ನದಿಯ ಅಗಲ ಒಂದು ಕಿಲೋಮೀಟರ್‌ಗೂ ಮೀರಿದ್ದು. ಇಂಥಾ ಬೃಹದಾಕಾರದ ಇಡೀ ನದಿಯು ಮಹಾನ್ ರಭಸದಿಂದ ಆರ್ಭಟಿಸುತ್ತಾ ವರ್ಷವಿಡೀ ಹರಿಯುತ್ತಾ ಇದ್ದದ್ದು ಚಳಿಗಾಲದಲ್ಲಿ ಮಾತ್ರ ಸಂಪೂರ್ಣ ಹೆಪ್ಪುಗಟ್ಟಿ ಮಂಜಾಗಿ ತೆಪ್ಪಗೆ ಮಲಗಿರುವ ಸ್ಥಿತಿಗೆ ಅಯ್ಯೋ ಎನಿಸಿ ಅದರ ಮೇಲೆ ಕಾಲ್ನಡಿಗೆಯಲ್ಲಿ ಹಾಯುವ ವೇಳೆಯಲ್ಲಿ ಒಂದು ಕ್ಷಣ ಎದೆಯಲ್ಲಿ ಝಿಲ್ ಎಂದೆನಿಸಿ ಭಯವಾಗುತ್ತದೆ, ಕಾರಣ ಧಿಡೀರ್ ಎಂದು ಮಂಜೆಲ್ಲಾ ಕರಗಿ ನೀರಾದರೆ ಗತಿ ಏನು ಎಂದು!

ಚಳಿಗಾಲದ ಅವಧಿಯಲ್ಲಿ ಇಡೀ ನಗರವನ್ನು ಎಲ್ಲೆಲ್ಲೂ ಮಂಜುಗಡ್ಡೆಯಿಂದ ಆಕರ್ಷಕವಾದ ಕಲಾಕೃತಿಗಳನ್ನು ನಿರ್ಮಿಸಿ ಅವುಗಳನ್ನು ಬಣ್ಣಬಣ್ಣದ ವಿದ್ಯುದ್ದೀಪಗಳಿಂದ ಅಲಂಕರಿಸಿ ಮೆರೆಸುವುದನ್ನು ಕಂಡಾಗ ಕಿನ್ನರ ಲೋಕವೇ ಧರೆಗಿಳಿದಿದೆಯೇನೋ ಎಂಬ ಅನುಭವ. ಆ ಕಿನ್ನರ ಲೋಕಕ್ಕೆ ಕಳಸವಿಟ್ಟಂತಿದೆ ೧೯೮೫ ರಿಂದೀಚೆಗೆ ಪ್ರತೀವರ್ಷ ಜನವರಿ ಮತ್ತು ಫೆಬ್ರವರಿಯ ಮಾಸದಲ್ಲಿ ಆಯೋಜಿಸುತ್ತಿರುವ ಹರ್ಬಿನ್ ಐಸ್ ಫೆಸ್ಟಿವಲ್ ಎಂಬ ಕಾರ್ಯಕ್ರಮ! ಈ ಕಾರ್ಯಕ್ರಮ ನಡೆಯುವ ವಲಯದಲ್ಲಿ ಹೊರ ಗೋಡೆಯಿಂದಿಡಿದು ಒಳಗಿನ ಸಮುಚ್ಚಯದಲ್ಲಿನ ಪ್ರತಿಯೊಂದು ಕಟ್ಟಡ, ವಾಣಿಜ್ಯ ಮಳಿಗೆ ಹಾಗೂ ವಿಶ್ವವಿಖ್ಯಾತ ಕಟ್ಟಡಗಳ ವಾಸ್ತುಶಿಲ್ಪಗಳ ಪ್ರತಿಕೃತಿಗಳನ್ನು ನಿರ್ಮಿಸಲು ಉಪಯೋಗಿಸುವುದು ವಿವಿಧ ಶ್ರೇಣಿಯ ಮಂಜುಗಡ್ಡೆಯನ್ನೆ! ಇನ್ನು ಆವರಣದ ನೆಲವಿಡೀ ಬೆಳ್ಳಗಿನ

ಅಪಾರದರ್ಶಕ ಮಂಜಿನ ಪುಡಿಯನ್ನು ಸಮತಟ್ಟಾಗಿ ಹರಡಿರುವುದನ್ನು ಗಮನಿಸಿದಾಗ, ಇಡೀ ವಲಯಕ್ಕೆ ಹಾಲಿನಂಥಹ ರತ್ನಗಂಬಳಿಯನ್ನು ಹಾಸಿದಂತೆ ಭಾಸವಾಗುವುದು. ಅಗಾಧ ಸಂಖ್ಯೆಯಲ್ಲಿ ಆಗಮಿಸುವ ಪ್ರವಾಸಿಗರಿಂದ ಆವರಣದಲ್ಲಿ ಎಲ್ಲೇ ಕೊಂಚ ಕಲೆಯಾದರೂ ಅಥವ ಕಸ ಬಿದ್ದರೂ ಅದನ್ನು ಕ್ಷಣಮಾತ್ರದಲ್ಲಿ ಶುಚಿ ಮಾಡಲು ನೇಮಿಸಿರುವ ಸಿಬ್ಬಂದಿಯವರ ಕಾರ್ಯತತ್ಪರತೆ ಮೆಚ್ಚತಕ್ಕದ್ದು! ಇಡೀ ಆವರಣಕ್ಕೆ ಮುಕುಟಪ್ರಾಯದಂತೆ ಸಮುಚ್ಚಯದ ಹೃದಯ ಭಾಗದಲ್ಲಿ ಪ್ರಪಂಚದಾದ್ಯಂತ ಆಗಮಿಸುವ ಮಂಜಿನ ಕಲಾಶಿಲ್ಪಿಗಳು ಸ್ಪರ್ಧೆಗೋಸ್ಕರ ಕಡೆದಿಟ್ಟಿರುವ ಮನಸ್ಸೆಳೆವ ಅತ್ಯಾಕರ್ಷಕ ಅಗಣಿತ ಬೆಲೆಯ ಕೌಶಲ್ಯಮಯ ಸಂಪೂರ್ಣ ಪಾರದರ್ಶಕ ಹಾಗೂ ದೋಷಮುಕ್ತ ಮಂಜಿನ ಕಲಾಕೃತಿಗಳು! ಆ ಇಡೀ ವಲಯದ ಸೌಂದರ್ಯ ರಾಶಿಯನ್ನು ವಿದ್ಯುತ್‌ದೀಪಗಳ ವರ್ಣರಂಜಿತ ಬೆಳಕಿನಲ್ಲಿ ರಾತ್ರಿಯ ವೇಳೆ ನೋಡಲೆರಡು ಕಣ್ಣುಗಳು ಸಾಲವು! ಹರ್ಬಿನ್ ನಗರದಲ್ಲಿ ಕಳೆದ ಮೂರು ದಿನಗಳ ಅವಧಿಯಲ್ಲಿ ಅನುಭವಿಸಿದ್ದ ಕನಿಷ್ಠ ತಾಪಮಾನ –೨೮ ಡಿಗ್ರಿ ಸೆಂಟಿಗ್ರೇಡ್. ಆ ಚಳಿಯನ್ನು ಎದುರಿಸಲು ಪೂರ್ವಭಾವಿಯಾಗಿ ಸಾಕಷ್ಟು ಸಿದ್ಧತೆಯಿಂದ ತೆರಳಿದ್ದರೂ, ಅಲ್ಲಿರುವವರೆಗೂ ಆ ಚಳಿಯ ಹೊಡೆತದಿಂದ ಕಣ್ಣುಗಳಲ್ಲಿ ನೀರು ನಿರಂತರವಾಗಿ ಧಾರಾಕಾರವಾಗಿ ಹರಿಯುತ್ತಿತ್ತು.

ಅತೀವೇಗದ ರೈಲಿನ ಸುದೀರ್ಘ ಪ್ರಯಾಣದ ಅನುಭವವನ್ನು ಮೆಲ್ಲಲೆಂದೇ ಆಯ್ಕೆ ಮಾಡಿಕೊಂಡಿದ್ದ ರೈಲಿನ ಪ್ರಯಾಣ ಮಾರನೆಯ ದಿನ ಪ್ರಾತಃಕಾಲ ಹರ್ಬಿನ್ ನಗರದಿಂದ ಆರಂಭವಾಗಿ ಲಿಯಾನಿಂಗ್ ರಾಜ್ಯದ ರಾಜಧಾನಿಯಾದ ಶೆನ್ಯಾಂಗ್‌ಗೆ ತಲುಪಲು ಆರು ಘಂಟೆಗಳ ಅವಧಿ ಹಿಡಿಯಿತು. ಸುಮಾರು ನಾಲ್ಕು ಘಂಟೆಗಳ ಪ್ರಯಾಣದ ಅವಧಿಯವರೆಗೆ ದಾರಿಯುದ್ದಕ್ಕೂ ಇಕ್ಕೆಡೆಗಳಲ್ಲಿ ಕಣ್ಣು ಹಾಯಿಸಿದಷ್ಟು ದೂರಕ್ಕೂ ಇಡೀ ಭೂರಮೆಯು ಬಿಳಿಯ ಸೆರಗನ್ನು ಹೊದ್ದು ಬಲು ಮೋಹಕವಾಗಿ ತೋರುತ್ತಿತ್ತು. ಆ ದೃಶ್ಯವನ್ನು ಕಂಡ ನನ್ನ ಮನದಾಳದಲ್ಲಿ ವ್ಯಕ್ತವಾದದ್ದು ಪೃಥ್ವಿ ಮಾತೆಗೆ ಇಳೀ ವಯಸ್ಸಾದ ಪರಿಣಾಮ ದಟ್ಟವಾಗಿ ಹರಡಿದ್ದ ನೆರೆತ ಕೂದಲೇನೋ ಎಂದು!

ಶೆನ್ಯಾಂಗ್ ನಗರದಲ್ಲಿ ಒಂದೂವರೆ ದಿನವಿದ್ದು ಅಲ್ಲಿನ ಮುಖ್ಯ ಪ್ರೇಕ್ಷಣಾ ಸ್ಥಳಗಳಾದ ಶೆನ್ಯಾಂಗ್ ಇಂಪೀರಿಯಲ್ ಅರಮನೆ, ಝಾವ್ಲಿಂಗ್ ಸಮಾಧಿ ಹಾಗೂ ಝಾಂಗ್ ಶೂಲಿಯಂಗ್ ಮ್ಯೂಸಿಯಂ ವೀಕ್ಷಿಸಿ ಮರುದಿನ ವಿಮಾನದಲ್ಲಿ ಶಾನ್ಸಿ ರಾಜ್ಯದ ರಾಜಧಾನಿಯಾದ ಶಿಯಾನ್ ತಲುಪಿದ್ದೆ. ಇತಿಹಾಸದ ಪುಟಗಳನ್ನು ತಿರುವಿದರೆ, ಈ ನಗರ ಅಸ್ತಿತ್ವಕ್ಕೆ ಬಂದು ಸುಮಾರು ಆರು ಸಾವಿರ ವರ್ಷಗಳು

ಕಳೆದು ಹದಿಮೂರು ರಾಜಮನೆತನಗಳನ್ನು ಕಂಡ ಹೆಗ್ಗಳಿಕೆಯನ್ನು ಹೊಂದಿದೆ. ಶಿಯಾನ್ ನಗರದ ಮುಖ್ಯ ಆಕರ್ಷಣೆ ಭೂಮಿಯ ಉತ್ಖನನದಲ್ಲಿ ದೊರಕಿರುವ ಟೆರ್ರಾಕೋಟ ಯೋಧರು ಮತ್ತು ಅಶ್ವಗಳ ಮ್ಯೂಸಿಯಂ ಮತ್ತು ನಗರದ ಹೃದಯಭಾಗದಲ್ಲಿ ಕಾಲನ ಹೊಡೆತಕ್ಕೆ ನಿರಂತರವಾಗಿ ಸಿಲುಕ್ಕಿದ್ದರೂ, ನಿಯತಕಾಲದಲ್ಲಿ ಪುನಃರುಜ್ಜೀವನ ಗೊಳಿಸಿಕೊಂಡು ಇನ್ನು ತನ್ನ ಇರುವಿಕೆಯನ್ನು ಸುಭದ್ರವಾಗಿ ಉಳಿಸಿಕೊಂಡಿರುವ ಸುಸ್ಥಿತಿಯ ಅಗಾಧವಾದ ಕೋಟೆ. ಈ ನಗರದ ಹೊರ ವಲಯದಲ್ಲಿ ಭೂಗರ್ಭ ಸಾರಿಗೆಯನ್ನು ಸಂಪೂರ್ಣ ನಿಷೇಧಿಸಲು ಮುಖ್ಯ ಕಾರಣ ಇಲ್ಲಿನ ಭೂಮಿಯು ತನ್ನೊಡಲೊಳಗೆ ಮತ್ತ್ಯಾವ ನಿಧಿಯನ್ನು ಅಡಗಿಸಿಕೊಂಡಿದೆಯೋ ಎಂಬ ಮಹದಾಸೆ!

ಕೋಟೆಯ ಸಮೀಪದಲ್ಲೇ ಇರುವ ಮಹಾ ಮಸೀದಿಯನ್ನು ನೋಡಿ ಬಹಳ ನಿರಾಸೆಯಾಯಿತು. ಏಕೆಂದರೆ ಆ ಮಸೀದಿಯು ಸಾಮಾನ್ಯ ಮಸೀದಿಯ ಕಟ್ಟಡದ ವಾಸ್ತುಶಿಲ್ಪದ ಶೈಲಿಯನ್ನು ಹೊಂದಿರದೆ, ಚೀನಿಯರ ಸಾಂಪ್ರದಾಯಿಕ ವಾಸ್ತುಶಿಲ್ಪದ ಶೈಲಿಯಲ್ಲಿ ಕಟ್ಟಿದ ಕಟ್ಟಡದ ತುತ್ತ ತುದಿಯಲ್ಲಿ ತುಂಡು ಚಂದ್ರನ ಆಕಾರದ ಒಂದು ಫಲಕವಿರಿಸಿ ಮಸೀದಿ ಎಂದು ಘೋಷಿಸಿದ್ದು! ಎರಡೂವರೆ ದಿನಗಳಲ್ಲಿ ಅಲ್ಲಿನ ಸಾಕಷ್ಟು ಪ್ರೇಕ್ಷಣೀಯ ಸ್ಥಳಗಳನ್ನು ಭೇಟಿ ಮಾಡಿ ಶಿಯಾಮನ್‌ಗೆ ಹಿಂತಿರುಗಿದ್ದೆ.

ಪೂರಾ ಒಂದು ವಾರದ ಈ ಪ್ರವಾಸಕ್ಕೆ ಮಾರ್ಗದರ್ಶಿಯಾಗಿ ನನ್ನೊಟ್ಟಿಗಿದ್ದವನು ಶ್ನೈಡರ್ ಎಲೆಕ್ಟ್ರಿಕ್‌ನಲ್ಲಿನ ನನ್ನ ಸಹೋದ್ಯೋಗಿಯಾದ ಕೆನ್ ಝೂ ಎಂಬಾತ. ಆತ ತನ್ನೊಂದಿಗೆ ತನ್ನ ಮಡದಿ, ಒಂದೂವರೆ ವರ್ಷದ ಕೈಗೂಸು ಮತ್ತು ಆತನ ಭಾವಮೈದುನನ ಸಂಸಾರವನ್ನು ಕರೆ ತಂದಿದ್ದ. ಪ್ರವಾಸದುದ್ದಕ್ಕೂ ಅವರೆಲ್ಲಾ ತಮ್ಮ ಅನಾನುಕೂಲತೆಯನ್ನು ಪರಿಗಣಿಸದೆ ನನ್ನನ್ನು ಪ್ರತಿಷ್ಠಿತ ಅತಿಥಿಯಂತೆ ಆದರಿಸಿದ್ದರು. ಆ ಆದರಕ್ಕೆ ಎಷ್ಟು ಋಣಿಯಾಗಿದ್ದರೂ ಸಾಲದು.

ಶಿಯಾಮನ್ ಶ್ನೈಡರ್ ಎಲೆಕ್ಟ್ರಿಕ್‌ನಲ್ಲಿ ಮೂರು ವರ್ಷಗಳು ಉರುಳುತ್ತಿದ್ದ ಹಾಗೇ ಬದಲಾವಣೆಯ ಗಾಳಿ ಬೀಸಲಾರಂಭಿಸಿತು. ಸಂಪೂರ್ಣ ಎ.ಪಿ.ಸಿ ಮಯವಾಗಿದ್ದ ಸಂಸ್ಥೆಯು ಸಾರಾಸಗಟಾಗಿ ಶ್ನೈಡರ್‌ಮಯವಾಗಲು ಮುಖ್ಯ ಕಾರಣ, ಶ್ನೈಡರ್ ಎಲೆಕ್ಟ್ರಿಕ್‌ನ ಹಿರಿಯ ಸಿಬ್ಬಂದಿ ಬಳಗದವರು ಕಡೆಗೂ ತಮ್ಮ ಕದಂಬ ಬಾಹುಗಳಿಂದ ಎ.ಪಿ.ಸಿಮಯವಾಗಿದ್ದ ಸಂಸ್ಥೆಗಳನ್ನು ತಮ್ಮ ತೆಕ್ಕೆಯೊಳಗಿರಿಸಿಕೊಳ್ಳುವಲ್ಲಿ ಯಶಸ್ವಿಯಾದರು! ಫಲಿತಾಂಶ, ಬೆಳಗಾಗುವುದರಲ್ಲಿ ನಂಬಲಿಕ್ಕಾಗದ ಬದಲಾವಣೆ, ಇದನ್ನು ಗಮನಿಸಿ ಇನ್ನು ಇಲ್ಲಿ ಮುಂದುವರೆಯುವುದರಲ್ಲಿ ಯಾವುದೇ

ಪ್ರಯೋಜನವಿಲ್ಲ ಎಂದು ಮನದಟ್ಟಾಯಿತು. ಕೂಡಲೇ ನಾಗ್‌ರವರಿಗೆ ನನ್ನ ನಿರ್ಧಾರ ತಿಳಿಸಿ ಬಿಡುಗಡೆ ಮಾಡಿ ಎಂದೆ.

ಪರಿಸ್ಥಿತಿಯು ಕಾವನ್ನು ನನಗಿಂತ ಚೆನ್ನಾಗಿ ಅರಿತಿದ್ದ ನಾಗ್‌ರವರು, ಶ್ನೈಡರ್‌ಮಯದ ಪರಿವರ್ತನೆ ಪೂರ್ಣಗೊಳ್ಳಲು ನನ್ನಿಂದ ಆಗಬೇಕಿದ್ದ ಕಾರ್ಯವನ್ನು ನಿರ್ವಹಿಸಿ ಹೊರಡು ಎಂದರು.

ಸುದೀರ್ಘ ಮೂರು ವರ್ಷ ಹನ್ನೊಂದು ತಿಂಗಳಿನ ಸೇವೆಗೆ ಮುಕ್ತಾಯ ಹಾಡಿ ತೆರಳುತ್ತಿದ್ದೇನೆ ಎಂಬ ಸುದ್ದಿ ತಿಳಿದೊಡನೆ ಸಹೋದ್ಯೋಗಿಗಳಿಂದ ಭಾವಪೂರಿತ ವಿದಾಯ ಸಮಾರಂಭಗಳೊಡನೆ ಭರಪೂರ ನೆನಪಿನ ಕಾಣಿಕೆಗಳ ಸುರಿಮಳೆಯಾಯಿತು!

ಅವುಗಳನ್ನೆಲ್ಲಾ ಗಮನಿಸುತ್ತಿದ್ದರೆ ನನಗನಿಸಿದ್ದು, ನನ್ನ ಸೇವಾವಧಿಯಲ್ಲಿ ಯಾರನ್ನೇ ಆಗಲಿ ಯಾವುದೇ ಕಾರಣಕ್ಕೂ ಎದುರು ಹಾಕಿಕೊಳ್ಳದೆ ಕಾರ್ಖಾನೆಯ ಅಂತರ್ವಿಭಾಗಗಳಲ್ಲಿ ಸೌಹಾರ್ದತೆಯನ್ನು ಕಾಪಾಡಿಕೊಂಡಿದ್ದ ಹೆಮ್ಮೆ!

ಕಾರ್ಖಾನೆಯಿಂದ ಹೊರ ಬರುವಷ್ಟರಲ್ಲಿ ಗಾಯತ್ರಿಯನ್ನು ಶಿಯಾಮನ್‌ಗೆ ಬರಮಾಡಿಕೊಂಡಿದ್ದೆ, ತದ ನಂತರ ಎರಡು ವಾರದ ವಿಹಾರ ಮುಗಿಸಿ ಚೀನಾಕ್ಕೆ ಅಂತಿಮ ವಿದಾಯ ಸಲ್ಲಿಸಿದ್ದೆ. ಮುಂದೇನು?

ನನ್ನ ಮನಸಿನಲ್ಲಿದ್ದದ್ದು, ಮೂರು ತಿಂಗಳು ಬಾಹ್ಯ ಪ್ರಪಂಚವನ್ನು ಸಂಪೂರ್ಣ ಮರೆತು ತಾಯಿ ತಂದೆಯರೊಂದಿಗೆ ಒಡನಾಟ. ನಂತರ ಕಾಲಹರಣಕ್ಕೊಂದು ದುಡಿಮೆ ಮಾಡಿ ಒಂಬತ್ತು ವರ್ಷಗಳಿಂದ ಕಳೆದುಕೊಂಡಿದ್ದ ನನ್ನವರು ಹಾಗೂ ತನ್ನವರೊಡನೆ ಬೆರೆತು ಬದುಕನ್ನು ನಿರಾಳವಾಗಿ ದೂಡುವುದು ಹಾಗೂ ಇಲ್ಲಿಯವರೆಗಿನ ಗಳಿಕೆಯ ಉಳಿಕೆಯಲ್ಲಿ ಮಗನ ವಿಧ್ಯಾಭ್ಯಾಸ ಪೂರೈಸುವುದೆಂದು.

ಆದರೆ ವಿಧಿಯ ಸಂಕಲ್ಪ ಎಂದಿದ್ದರೂ ತದ್ವಿರುದ್ಧದ್ದೇ! ಆದರೂ ತಾಯಿ ತಂದೆಯರೊಡನೆ ಮೂರು ತಿಂಗಳು ಒಡನಾಡುವುದಕ್ಕೇನು ಕೊರತೆ ಮಾಡದೆ ಮಿಕ್ಕವುಗಳನ್ನು ಮಾತ್ರ ಒಪ್ಪದೆ ಮತ್ತೆ ಅಟ್ಟಿದ್ದ ವಾಪಸ್ಸು ಚೀನಾಕ್ಕೆ!

ನಾನು ಶ್ನೈಡರ್ ಎಲೆಕ್ಟ್ರಿಕ್ ತೊರೆದ ವಿಚಾರ ತಿಳಿದ ಕೂಡಲೇ ಶ್ರೀಯುತ ಪೋ.ಚೀ. ಚಾಂಗ್, ನನ್ನ ಮಾಜಿ ಉದ್ಯೋಗದಾತ ನೆನಪಿಸಿದ್ದರು "ಮೋಹನ್, ನಮ್ಮ ಕಂಪೆನಿಯ ಬಾಗಿಲು ನಿಮಗಾಗಿ ಯಾವತ್ತೂ ತೆರೆದಿರುತ್ತೆ" ಆ ಮಾತಿಗೆ

ಮನ್ನಣೆಯಿತ್ತು ಚೀನಾಕ್ಕೆ ವಿದಾಯ ಹೇಳಿದ್ದ ಐದು ತಿಂಗಳ ಬಳಿಕ ಮತ್ತೆ ಚೀನಾದಲ್ಲಿನ ಸೂಜೌ ನಗರವಾಸಿಯಗಿದ್ದೆ.

ಸತತ ಮೂವತ್ತು ವರ್ಷಗಳ ನಿರಂತರ ಉದ್ಯೋಗ ಜೀವನದ ಬಳಿಕ ಅಚಾನಕ್ ಆಗಿ ದೊರೆತ ಅತೀ ದೀರ್ಘ ಕಾಲದ ಬಿಡುವಿನ ವೇಳೆಯಾದ ಭಾರತದಲ್ಲಿನ ಐದು ತಿಂಗಳ ವಾಸ್ತವ್ಯದಲ್ಲಿ ತಾಯಿ ತಂದೆಯವರೊಂದಿಗೆ ಹೆಚ್ಚು ಕಾಲ ವ್ಯೆಯಿಸಿ, ಬಂಧು ಮಿತ್ರರನ್ನು ಭೇಟಿ ಮಾಡಿ ಗತಕಾಲದ ಅನುಭವಗಳ ಮೆಲುಕು ಹಾಗೂ ಪ್ರಸ್ತುತ ವಿಷಯಗಳ ಅವಲೋಕನವಲ್ಲದೇ ಮುಂದಿನ ನಡೆಯ ಬಗ್ಗೆ ವಿಚಾರ ಮಾಡುತ್ತಲಿರುವ ಸಂದರ್ಭದಲ್ಲಿ ಸ್ನೇಹಿತ ಶೇಷಗಿರಿಯು ನಾನೀವರೆಗೆ ಕಾಣದ ಅತ್ಯಂತ ಅದ್ಭುತ ಹಾಗೂ ವಿಸ್ಮಯಕಾರಿ ಲೋಕದ ದ್ವಾರವನ್ನು ಅನಾಯಾಸವಾಗಿ ತೆರೆದು ನನಗೆ ಪರಿಚಯಿಸಿದ್ದ!

ಅದುವೆ ಅಭೂತಪೂರ್ವ ಪಕ್ಷಿಗಳ ಲೋಕ!

ಪಕ್ಷಿ ವೀಕ್ಷಣೆಯಲ್ಲಿ ಅಪರಿಮಿತ ಅನುಭವವನ್ನು ಕರಗತ ಮಾಡಿಕೊಂಡಿರುವ ಈತ ಪಕ್ಷಿ ವೀಕ್ಷಣೆಯ ನಿಜ ವಿಷಯಾಸಕ್ತರಿಗೆ ಯಥಾವತ್ತಾಗಿ ಮಾರ್ಗದರ್ಶನವನ್ನು ಮಾಡುತ್ತಾ ಜೊತೆ ಜೊತೆಗೆ ಪ್ರಕೃತಿಯ ಸಮತೋಲನತೆಗೆ ಸಹಕಾರಿಯಾಗುವಂಥಹ ಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಂಡು ಪ್ರಕೃತಿ ಮಾತೆಗೆ ತನ್ನ ಅಳಿಲು ಸೇವೆಯನ್ನು ಎಲೆಮರೆಯ ಕಾಯಿಯಂತೆ ತನ್ನದೇ ಆದ ರೀತಿಯಲ್ಲಿ ಸಲ್ಲಿಸುತ್ತಾ ಜೀವನವನ್ನು ಸಾರ್ಥಕ್ಯಗೊಳಿಸಿಕೊಳ್ಳುತ್ತಿರುವುದನ್ನು ಕಂಡು ಹೆಮ್ಮೆ ಎನಿಸಿತ್ತು. ಈ ಪ್ರವೃತ್ತಿಗೆ ಇಂಬು ಕೊಡುವಂತೆ ಆತನ ಕುಟುಂಬದ ಸದಸ್ಯರು ಪರಭಾರೆ ಮಾಡುತ್ತಿರುವ ಸಹಕಾರವಂತೂ ಶ್ಲಾಘನೀಯ!

ಮೈಸೂರಿನ ಸಮೀಪದ ಕೆಲವು ನೀರಿನ ಭಂಡಾರಗಳೆನಿಸಿದ ಕೆರೆ, ಕೊಳ್ಳ ಮತ್ತು ಹೊಂಡಗಳಿರುವ ಸ್ಥಳಗಳಿಗೆ ನನ್ನನ್ನು ಕರೆದೊಯ್ದು ಸುಮಾರು ನೂರೈವತ್ತಕ್ಕೂ ಮಿಕ್ಕ ಹಕ್ಕಿಗಳ ಪ್ರಬೇಧವನ್ನು ಗುರುತಿಸಲು ನನ್ನನ್ನು ಸಾಕ್ಷಿಯಾಗಿಸಿದ್ದ!

ಮುಂದುವರೆದು ಉತ್ತರಕರ್ನಾಟಕದ ದಾಂಡೇಲಿಗೆ ಸೆಳೆದೊಯ್ದು ಅಲ್ಲಿನ ಶ್ರೀಮಂತ ದಟ್ಟ ಕಾನನದ ವೈಭವದ ಹಿನ್ನೆಲೆಯಲ್ಲಿ ಅಪರೂಪದ ಹಕ್ಕಿಗಳ ಪ್ರಬೇಧಗಳನ್ನು ವೀಕ್ಷಿಸಲು ಅನುವು ಮಾಡಿಕೊಟ್ಟಿದ್ದಲ್ಲದೇ, ಸದ್ಯಕ್ಕೆ ಹುಬ್ಬಳ್ಳಿಯಲ್ಲಿ ಉದ್ಯೋಗ ನಿಮಿತ್ತ ನೆಲೆಸಿದ್ದು, ಜನ್ಮದಾತೆಯ ಸೇವೆಗಿಂತ ಮಿಗಿಲಾದ ಮತ್ತೊಂದು ಪುಣ್ಯ ಕಾರ್ಯ ಈ ಜಗದಲ್ಲಿಲ್ಲ ಎನ್ನುವ ಸತ್ಯವನ್ನು ಮನಗಂಡು ಮದುವೆ, ಸಂಸಾರವೆಂಬ ಮಾಯೆಗೆ ಸಿಲುಕದೆ ತನ್ನ ವೃದ್ಧ ತಾಯಿಯ ಸೇವಾ ಕೈಂಕರ್ಯದಲ್ಲಿ

ತನ್ನನ್ನು ತೊಡಗಿಸಿಕೊಂಡು ಪುನೀತನಾಗುತ್ತಿರುವ ಗೆಳೆಯ ರಾಮಗೋಪಾಲನನ್ನು ಭೇಟಿ ಮಾಡಿಸಿದ್ದ.

ಅದೆಷ್ಟೋ ವರ್ಷಗಳ ತರುವಾಯ ನಾವು ಮೂವರು ಸ್ನೇಹಿತರು ಒಬ್ಬರನ್ನೊಬ್ಬರು ಮುಖತಃ ಭೇಟಿಯಾಗಿದ್ದು ಅದೊಂದು ರೀತಿಯ ಅಪೂರ್ವ ಸಂಗಮವೆನಿಸಿತ್ತು. ಭೇಟಿ ಮಾಡಿದ ಅವಧಿ ಕನಿಷ್ಠವಾದರೂ ಚರ್ಚಿಸಿದ ವಿಷಯಗಳ ಗಾತ್ರ ಮಾತ್ರ ಅಗಾಧವೆನಿಸಿದ್ದು ನಿಜ! ಜೊತೆಗೆ ಪ್ರಸ್ತುತ ಪ್ರಪಂಚದಲ್ಲಿ ಅಪರೂಪಕ್ಕೊಬ್ಬರು ಕಾಣ ಸಿಗುವ ಇಂಥಹ ಸುಪುತ್ರನನ್ನು ಹಡೆದ ಆ ಹಿರಿಯ ಚೇತನದ ಆಶೀರ್ವಾದದ ವರವನ್ನು ಶಿರಸ್ಸಿನಲ್ಲಿ ಧರಿಸಿದಾಗ ಧನ್ಯತೆಯ ಭಾವಕ್ಕೊಳಗಾಗಿದ್ದೆ! ಮುಂದೇನು?





# ಪಯಣ

'ಪಯಣ' ಸಾಮಾನ್ಯ ಕಾರ್ಮಿಕನೊಬ್ಬ ತನ್ನ ಅರಿಯುವ ಹಂಬಲ, ಪ್ರಾಮಾಣಿಕತೆ, ಪರಿಶ್ರಮ ಹಾಗೂ ವಿನಯವಂತಿಕೆಯಿಂದ ಸಾಧನೆಯ ಏಣಿಯನ್ನು ಹಂತ-ಹಂತವಾಗಿ ಏರಿದ ಕಥೆ. ಇಡೀ ಪುಸ್ತಕದ ಪ್ರತಿ ಅಧ್ಯಾಯದಲ್ಲೂ ಅಷ್ಟೇಕೆ-ಪ್ರತಿಸಾಲಿನಲ್ಲೂ -ಕಷ್ಟವನ್ನು ಎದುರಿಸಿ ನಿಲ್ಲುವ ಛಲ ಹಾಗೂ ಜೀವನೋತ್ಸಾಹವನ್ನು ಕಾಣಬಹುದಾಗಿದೆ.

ಹಿರಿಯ ರಂಗಕರ್ಮಿ ಹಾಗೂ ಲೇಖಕರೂ ಆದ ಶ್ರೀ ಶ್ರೀಕಂಠಗುಂಡಪ್ಪನವರು ತಮ್ಮ ಮುನ್ನುಡಿಯಲ್ಲಿ ಹೇಳಿರುವ-"ತೆರೆದಿಟ್ಟ ಪುಸ್ತಕದಂತೆ ಈ ಕಥಾನಾಯಕನ ಬದುಕು.ಶೂನ್ಯದಿಂದ ಶಿಖರವೇರುವಾಗ ಎದುರಾದ ಬಂಡೆಗಳನ್ನು ನಾಜೂಕಾಗಿ ಹಿಡಿದು ಗುರಿಮುಟ್ಟಿದ ಚಾರಣಿಗ. ನೂರಾರು ಉಳಿಪೆಟ್ಟು ತಿಂದು ಸುಂದರ ಅಕೃತಿ ಮೂಡುವಂತೆ ಸಮಸ್ಯೆಗಳನ್ನು ಸಂಯಮದಿಂದ ಸ್ವೀಕರಿಸಿ ಕೌಟುಂಬಿಕ ಸಾಮರಸ್ಯವನ್ನು ಕಾಯ್ದುಕೊಳ್ಳಲು ಹೆಣಗಿದ ಜೀವ.ಆಸೆ, ಆಕಾಂಕ್ಷೆ ಮತ್ತು ಆತಂಕಗಳಲ್ಲಿ ಅರಳಿದ ಬದುಕು'.ಎಂಬ ಮಾತಿನಲ್ಲಿ ಎಳ್ಳಷ್ಟೂ ಉತ್ಪ್ರೇಕ್ಷೆ ಇಲ್ಲ.

ಪ್ರಸ್ತುತ ಪುಸ್ತಕವು ಲೇಖಕ ಎಸ್.ಮೋಹನ್ ಅವರು ದಿನಗೂಲಿಯಿಂದ ವೃತ್ತಿ ಪ್ರಾರಂಭಿಸಿ ಇಂದು ಚೀನಾದಲ್ಲಿನ ಬಹುರಾಷ್ಟ್ರೀಯ ಕಾರ್ಖಾನೆಯಲ್ಲಿ ಮುಖ್ಯಸ್ಥರಾದ ಸಾಹಸಗಾಥೆಯಷ್ಟೇ ಅಲ್ಲ-ಸರಳ ಭಾಷೆ ಹಾಗೂ ತನ್ನ ಆತ್ಮೀಯ ಶೈಲಿಯೊಂದಿಗೆ ಓದಿಸಿಕೊಂಡು ಹೋಗುವ ಈ ಕಥನ ಇಂದಿನ ಯುವ ಪೀಳಿಗೆಗೆ ಸವಾಲುಗಳನ್ನು ಎದುರಿಸುವ ಸ್ಫೂರ್ತಿ ನೀಡುವಂತಹದ್ದು.

ಪ್ರಕಾಶಕ- ಸಂಪಾದಕ
**ಸಂಸ್ಕೃತಿ ಸುಬ್ರಹ್ಮಣ್ಯ**
#೯೨. ೯ನೇ ಮುಖ್ಯರಸ್ತೆ. ಸರಸ್ವತಿಪುರ.
ಮೈಸೂರು-೫೭೦೦೦೯
ಮೊ: ೯೪೪೮೦೫೭೭೬೨